KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಡಿಸೆಂಬರ್ ೪, ೨೦೦೮ (ಮಾರ್ಗಶಿರ ೧೩, ಶಕ ವರ್ಷ ೧೯೩೦) | ಸಂಚಿಕೆ ೪೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಲೋಕೋಪಯೋಗಿ, ಬಂದರು ಒಳನಾಡು ಮತ್ತು ಜಲಸಾರಿಗೆ ಸಚಿವಾಲಯ

**ವಿಷಯ :** ವಾಸ್ತುವಿನ್ಯಾಸದ ನಕ್ಷೆಗಳನ್ನು ಒದಗಿಸುವ ಬಗ್ಗೆ.

**ಓದಲಾಗಿದೆ:** 1. ಇ–ಆಡಳಿತ ಕೇಂದ್ರ, ಬೆಂಗಳೂರು ರವರಿಂದ ಹೊರಡಿಸಿರುವ ಪ್ರಕಟಣೆ ಸಂ: ಡಿಪಿಎಆರ್ 26 ಇಜಿವಿ 2003 (ಭಾಗ–1) ದಿನಾಂಕ 4–3–2008.

2. ಸರ್ಕಾರದ ಆದೇಶ ಸಂ: ಪಿಡಬ್ಲ್ಯೂಡಿ 20 ಇಎಪಿ 2008, ದಿನಾಂಕ: 19–3–2008.

**ಪ್ರಸ್ತಾವನೆ:**

ಸರ್ಕಾರವು ಉಲ್ಲೇಖ (1)ರಲ್ಲಿ ಹೊರಡಿಸಿರುವ ಪ್ರಕಟಣೆಯಲ್ಲಿ ರೂ. 50.00 ಲಕ್ಷಗಳ ಮತ್ತು ಮೇಲ್ಪಟ್ಟ ಮೊತ್ತದ ಕಾಮಗಾರಿಗಳನ್ನು ಇ–ಸಂಗ್ರಹಣೆಯ ಮೂಲಕವೇ ಸಂಗ್ರಹಿಸಲು ಪ್ರಕಟಿಸಿದೆ. ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ಇ–ಸಂಗ್ರಹಣೆಯನ್ನು ಕಾರ್ಯಗತಗೊಳಿಸಲು ಕಾರ್ಯವಿಧಾನವನ್ನು ವಿವರಿಸಿದೆ. ಇ–ಸಂಗ್ರಹಣೆಯ ಪ್ರಕ್ರಿಯೆಯಲ್ಲಿ ಕಾಮಗಾರಿಗಳ ಗುತ್ತಿಗೆ ದಾಸ್ತಾವೇಜಿನ ಜೊತೆ ಅವಶ್ಯಕವಾದ ನಕ್ಷೆಗಳನ್ನು ಡಿಜಿಟಲ್ ರೂಪದಲ್ಲಿ ಲಗತ್ತಿಸಬೇಕಾಗಿರುತ್ತದೆ. ಇಲಾಖೆಯ ವಾಸ್ತುವಿನ್ಯಾಸದ ವಿಭಾಗವು ಆಧುನೀಕರಣಗೊಂಡಿದ್ದು ಇತ್ತೀಚಿನ ದಿನಗಳಲ್ಲಿ ಎಲ್ಲಾ ವಾಸ್ತುವಿನ್ಯಾಸದ ನಕ್ಷೆಗಳನ್ನು CAD ತಂತ್ರಾಂಶವನ್ನು ಉಪಯೋಗಿಸಿ ತಯಾರಿಸಲಾಗುತ್ತಿದ್ದು, ಡಿಜಿಟಲ್ ನಕ್ಷೆಗಳನ್ನು ತಯಾರಿಸುವುದು ಹೊಸ ವಿಷಯವಾಗಿರುವುದಿಲ್ಲ.

ಇಲ್ಲಿಯವರೆಗೆ ವಾಸ್ತು ವಿನ್ಯಾಸವನ್ನು ಒದಗಿಸುತ್ತಿದ್ದ ಕಾರ್ಯವಿಧಾನವು ಈ ಕೆಳಕಂಡಂತೆ ಇರುತ್ತದೆ:

ಅ) ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರರವರು ಯೋಜನೆಯ ನಕ್ಷೆಗಳಿಗಾಗಿ ಕೋರಿಕೆಯನ್ನು ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳಿಗೆ ಸಲ್ಲಿಸುತ್ತಾರೆ.

ಆ) ನಂತರ ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ಕಾರ್ಯಪಾಲಕ ಅಭಿಯಂತರರವರೊಂದಿಗೆ ಅಥವಾ ಅವರ ಪ್ರತಿನಿಧಿಗಳೊಂದಿಗೆ ಜಂಟಿ ಪರಿವೀಕ್ಷಣೆ ನಡೆಸುತ್ತಾರೆ.

ಇ) ಜಂಟಿ ಪರಿವೀಕ್ಷಣೆಯ ಆಧಾರದ ಮೇಲೆ ಬ್ಲಾಕ್ ಲೆವೆಲ್ ವಿವರಗಳು ಮತ್ತು ಲೇಔಟ್ ಪ್ಲಾನ್‌ನೊಂದಿಗೆ ವಾಸ್ತುವಿನ್ಯಾಸದ ನಕ್ಷೆಗಳನ್ನು ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳ ಕಛೇರಿಯಲ್ಲಿ ತಯಾರಿಸಿ, ನಕ್ಷೆಯ ನೀಲಿ ಪ್ರತಿಗಳನ್ನು ಕಾರ್ಯಪಾಲಕ ಅಭಿಯಂತರವರಿಗೆ ನೇರವಾಗಿ ಬಿಡುಗಡೆ ಮಾಡಲಾಗುತ್ತಿದೆ.

ಈ) ಕಾರ್ಯಪಾಲಕ ಅಭಿಯಂತರವರ ಕೋರಿಕೆಯ ಮೇರೆಗೆ ಸದರಿ ನಕ್ಷೆಗಳನ್ನು ಮಾರ್ಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

ಆದರೆ ಕೆಲವು ಸಂದರ್ಭಗಳಲ್ಲಿ ಕಾಮಗಾರಿಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿರುವಾಗ ಸಹ ನಕ್ಷೆಯಲ್ಲಿ ಬದಲಾವಣೆಗೊಳಿಸಲಾಗುತ್ತಿದೆ. ಇದರಿಂದ ಇಐಆರ್ಎಲ್/ಕೆಲಸದ ಪಟ್ಟಿಗಳು ಉದ್ಭವವಾಗುತ್ತಿದೆ. ಕೆಲವೊಂದು ಪ್ರಕರಣಗಳಲ್ಲಿ ಸದರಿ ನಕ್ಷೆಗಳಂತೆ ಕಾಮಗಾರಿಗೆ ಕಾರ್ಯಾದೇಶ ನೀಡಲಾಗಿದ್ದರೂ ಮುಖ್ಯ ಇಂಜಿನಿಯರ್‌ರವರ ವಿನ್ಯಾಸಶಾಖೆಗೆ ತಿಳಿಸಿರುವುದಿಲ್ಲವಾದ್ದರಿಂದ ಸ್ಟ್ರಕ್ಚರಲ್ ವಿನ್ಯಾಸ ಹಾಗೂ ನಕ್ಷೆಗಳನ್ನು ಸರಿಯಾದ ಸಮಯಕ್ಕೆ ನೀಡಲು ವಿಳಂಬವಾಗುತ್ತಿದೆ.

ಸದರಿ ವಿಚಾರದ ಬಗ್ಗೆ ದಿನಾಂಕ 20–8–2008 ರಂದು ನಡೆದ ಮಾಸಿಕ ಸಭೆಯಲ್ಲಿ ಸರ್ಕಾರದ ಕಾರ್ಯದರ್ಶಿಗಳು ವಿಮರ್ಶೆ ಮಾಡಿ ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳಿಗೆ ಈ ಕೆಳಕಂಡಂತೆ ನಿರ್ದೇಶನ ನೀಡಿರುತ್ತಾರೆ.

ಅ) ವಾಸ್ತು ವಿನ್ಯಾಸಗಳನ್ನು ಕಾಮಗಾರಿಗೆ ಒದಗಿಸಿರುವ ಹಣವನ್ನು ಗಮನದಲ್ಲಿರಿಸಿಕೊಂಡು ತಯಾರಿಸತಕ್ಕದ್ದು. ವಾಸ್ತುವಿನ್ಯಾಸ ನಕ್ಷೆಗಳನ್ನು ನೇರವಾಗಿ ಕಾರ್ಯಪಾಲಕ ಅಭಿಯಂತರವರಿಗೆ ನೀಡುವ ಬದಲು ಕಡ್ಡಾಯವಾಗಿ ಮುಖ್ಯ ಇಂಜಿನಿಯರ್‌ರವರಿಗೆ ಕಳುಹಿಸುವುದು. ನಂತರ ಮುಖ್ಯ ಇಂಜಿನಿಯರ್ ಅದನ್ನು ಪರಿಶೀಲಿಸಿ ಮೇಲುರುಜು ಮಾಡಿ ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರವರಿಗೆ ರವಾನಿಸುವುದು.

ಆ) ಕಾಮಗಾರಿಗೆ ತಾಂತ್ರಿಕ ಮಂಜೂರಾತಿ ನೀಡಿದ ನಂತರ ಹಾಗೂ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದ್ದಾಗ ನಕ್ಷೆಯಲ್ಲಿ ಯಾವುದೇ ಬದಲಾವಣೆಯನ್ನು ಮಾಡಬಾರದು. ಒಂದು ವೇಳೆ ನಕ್ಷೆಯಲ್ಲಿ ಪರಿಷ್ಕರಣೆ ವಾಸ್ತವಿಕವಾಗಿ ಬೇಕಾಗಿದ್ದಲ್ಲಿ ಅಂತಹ ಪ್ರಸಂಗಗಳನ್ನು ಮುಖ್ಯ ಇಂಜಿನಿಯರವರೊಂದಿಗೆ ಸಮಾಲೋಚನೆ ನಡೆಸಿ ನಂತರ ನೀಡುವುದು. ಇದರಿಂದ ಗುತ್ತಿಗೆಯ ನಿರ್ವಹಣೆಯ ಮೇಲೆ ಆಗುವ ಆರ್ಥಿಕ ಹೊರೆಯನ್ನು ಮುಖ್ಯ ಇಂಜಿನಿಯರವರು ಮೌಲ್ಯಮಾಪನ ಮಾಡಬೇಕು.

ಇ) ಇ–ಸಂಗ್ರಹಣೆಯ ಪ್ರಕ್ರಿಯೆಯ ವ್ಯವಸ್ಥೆಯನ್ನು ಸಾಧ್ಯವಾಗಿಸಲು ಡಿಜಿಟಲ್ ರೂಪದಲ್ಲಿ ವಿನ್ಯಾಸಗಳನ್ನು ನೀಡುವುದು. ಇದರಿಂದ ಸ್ಟ್ರಕ್ಚರಲ್ ವಿನ್ಯಾಸ ಮತ್ತು ನಕ್ಷೆಗಳನ್ನು ಸರಿಯಾದ ಸಮಯಕ್ಕೆ ನೀಡಲು ಅನುಕೂಲವಾಗುತ್ತದೆ.

ಈ) ಮಾಹಿತಿ ಮತ್ತು ತಂತ್ರಜ್ಞಾನ ಕಾಯಿದೆ–2000 ವನ್ನು ಅನುಸರಿಸಲು ಡಿಜಿಟೆಲ್ ಸಹಿಯೊಂದಿಗೆ ನಕ್ಷೆಗಳನ್ನು ಬಿಡುಗಡೆಗೊಳಿಸಲು ಮತ್ತು ಈ ಎಲ್ಲಾ ನಕ್ಷೆಗಳನ್ನು ಅಧಿಕೃತ ಇ–ಮೇಲ್ ಮೂಲಕ ಸಂಬಂಧಪಟ್ಟ ಅಧಿಕಾರಿಗಳಿಗೆ ನೀಡುವುದು. ಈ ಎಲ್ಲಾ ಅಂಶಗಳನ್ನು ಕಾರ್ಯಗತಗೊಳಿಸಲು ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಲೋಇ 20 ಇಎಪಿ 2008, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2008.**

ಸರ್ಕಾರವು ವಾಸ್ತುವಿನ್ಯಾಸವನ್ನು ತಯಾರಿಸುವಾಗ ಮತ್ತು ನೀಡುವಾಗ ಈ ಕೆಳಕಂಡ ನಿರ್ದೇಶನಗಳನ್ನು ಪಾಲಿಸಲು ಸೂಚಿಸಿದೆ.

ಅ) ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ಯೋಜನೆಯ ಸ್ಥಳಕ್ಕೆ ಭೇಟಿ ನೀಡಿ ಬ್ಲಾಕ್ ಲೆವೆಲ್ ಮತ್ತು ಲೇಔಟ್, ಪ್ಲಾನ್‌ನ ಪೂರ್ಣ ವಿವರಗಳನ್ನು ಪಡೆದು ಒದಗಿಸಿರುವ ಹಣದ ಲಭ್ಯತೆಯ ಮೇರೆಗೆ ಹಾಗೂ ಅಗತ್ಯತೆಯನ್ನಾಧರಿಸಿ ಅಗತ್ಯವಿದ್ದಲ್ಲಿ ಸಂಬಂಧಪಟ್ಟ ಮುಖ್ಯ ಇಂಜಿನಿಯರವರೊಂದಿಗೆ ಚರ್ಚಿಸಿ (ಮಾದರಿ ನಕ್ಷೆಗಳನ್ನು ಹೊರತುಪಡಿಸಿ) ನಕ್ಷೆಯನ್ನು ನೀಡುವುದು.

ಆ) ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ವಾಸ್ತುವಿನ್ಯಾಸದ ನಕ್ಷೆಗಳನ್ನು ಸಂಬಂಧಪಟ್ಟ ಮುಖ್ಯ ಇಂಜಿನಿಯರ್‌ರವರಿಗೆ ನೀಡುವುದು ಮತ್ತು ಮುಖ್ಯ ಇಂಜಿನಿಯರ್‌ರವರು ಅವುಗಳನ್ನು ಪರಿಶೀಲಿಸಿ ಮೇಲುರುಜು ಮಾಡಿ ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರವರಿಗೆ ರವಾನಿಸತಕ್ಕದ್ದು.

ಇ) ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ವಾಸ್ತುವಿನ್ಯಾಸದ ನಕ್ಷೆಗಳನ್ನು ನೀಡುವಾಗ ಕರ್ನಾಟಕ ಅಗ್ನಿಶಾಮಕ ಹಾಗೂ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ನಿಬಂಧನೆಗಳಿಗೆ ಒಳಪಟ್ಟಿರುವ ಎಲ್ಲಾ ಅಂಶಗಳನ್ನು ಗಮನದಲ್ಲಿಡತಕ್ಕದ್ದು.

ಈ) ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ತಾಂತ್ರಿಕ ಮಂಜೂರಾತಿ ನೀಡಿದ ನಂತರ ವಾಸ್ತುವಿನ್ಯಾಸದ ನಕ್ಷೆಗಳನ್ನು ಪರಿಷ್ಕರಿಸಬಾರದು. ಒಂದು ವೇಳೆ ನಕ್ಷೆಯಲ್ಲಿ ಪರಿಷ್ಕರಣೆ ಅನಿವಾರ್ಯವಿದ್ದಲ್ಲಿ ಸದರಿ ವಿಷಯವನ್ನು ಸಂಬಂಧಪಟ್ಟ ಮುಖ್ಯ ಇಂಜಿನಿಯರವರೊಂದಿಗೆ ಸಮಾಲೋಚಿಸಿ ನಂತರ ಪರಿಷ್ಕರಿಸಬೇಕು. ಮುಖ್ಯ ಇಂಜಿನಿಯರ್‌ರವರು ಗುತ್ತಿಗೆ ನಿರ್ವಹಣೆಯ ಮೇಲೆ ಆಗುವ ಆರ್ಥಿಕ ಹೊರೆಯ ಬಗ್ಗೆ ಮೌಲ್ಯಮಾಪನ ಮಾಡಿ ಸೂಕ್ತ ನಿರ್ಧಾರವನ್ನು ತೆಗೆದುಕೊಂಡು ಸದರಿ ಬದಲಾವಣೆಗಳನ್ನು ಮತ್ತು ಇದರಿಂದಾಗುವ ಆರ್ಥಿಕ ಹೊರೆಯ ಬಗ್ಗೆ ಉಪಯೋಗಿತ ಸಕ್ಷಮ ಪ್ರಾಧಿಕಾರ/ಇಲಾಖೆಯವರ ಗಮನಕ್ಕೆ (user department) ತಂದು ಒಪ್ಪಿಗೆ/ಅನುಮೋದನೆ ಪಡೆದು ಮುಂದುವರಿಯತಕ್ಕದ್ದು.

ಉ) ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ಇ–ಸಂಗ್ರಹಣೆಯ ಪ್ರಕ್ರಿಯೆಯ ವ್ಯವಸ್ಥೆಯನ್ನು ಸಾಧ್ಯವಾಗಿಸಲು ಹಾಗೂ ಸ್ಟ್ರಕ್ಚರಲ್ ವಿನ್ಯಾಸ ಮತ್ತು ನಕ್ಷೆಗಳನ್ನು ತಯಾರಿಸಲು ಅನುಕೂಲವಾಗಲು ಡಿಜಿಟಲ್ ರೂಪದಲ್ಲಿ ವಾಸ್ತುವಿನ್ಯಾಸಗಳನ್ನು ನೀಡತಕ್ಕದ್ದು.

ಊ) ಮಾಹಿತಿ ಮತ್ತು ತಂತ್ರಜ್ಞಾನ ಕಾಯಿದೆ 2000 ವನ್ನು ಅನುಸರಿಸಲು ಡಿಜಿಟೆಲ್ ಸಹಿಯೊಂದಿಗೆ ನಕ್ಷೆಗಳನ್ನು ಸಂಬಂಧಪಟ್ಟ ಮುಖ್ಯ ಇಂಜಿನಿಯರುಗಳಿಗೆ ನೀಲಿ ನಕ್ಷೆ (ಬ್ಲೂ ಪ್ರಿಂಟ್) ಪ್ರತಿಗಳೊಂದಿಗೆ ಇ–ಮೇಲ್/ಸಿ.ಡಿ./ ಡಿ.ವಿ.ಡಿ. ಡಿಸ್ಕ್‌ನಲ್ಲಾಗಲಿ ಬಿಡುಗಡೆಗೊಳಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1538

**ಟಿ. ಸುಕುಮಾರ್**

ಸರ್ಕಾರದ ಕಾರ್ಯದರ್ಶಿಗಳು,
ಲೋಕೋಪಯೋಗಿ, ಬಂದರು ಒಳನಾಡು
ಮತ್ತು ಜಲಸಾರಿಗೆ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕಾತಿ ಮಾಡಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಕಂಇ 37 ಪಿಎಫ್‌ಎನ್ 1994, ದಿನಾಂಕ 17–9–1996.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 51 ಮುನೊಸೋ 2006, ದಿನಾಂಕ 12–1–2007.
3. ಆಡಳಿತಾಧಿಕಾರಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಹಾಗೂ ಉಪ ವಿಭಾಗಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ರವರ ಪತ್ರ ಸಂಖ್ಯೆ: ಸಿಇಎಸ್/1/ 2007–08, ದಿನಾಂಕ 31–7–2008.
4. ಪ್ರಾಂಶುಪಾಲರು ಸೆಂಟ್ರಲ್ ಸಂಯುಕ್ತ ಪದವಿ ಪೂರ್ವ ಕಾಲೇಜು, ಊರ್ಡಿಗೆರೆ, ತುಮಕೂರು ರವರ ಪತ್ರ ದಿನಾಂಕ 11–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ 17–9–1996ರ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು, ಆಡಳಿತಾಧಿಕಾರಿ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 12–1–2007ರ ಆದೇಶದಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ 19–9–2006 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 31–7–2008ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ ರವರು ಸದರಿ ಸಂಸ್ಥೆಗೆ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ 19–3–2006 ರಿಂದ 6 ತಿಂಗಳ ಅವಧಿವರೆಗೆ ವಿಸ್ತರಿಸಿ ಈ ಅವಧಿಯೊಳಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಕೋರಿದ್ದು, ಈವರೆವಿಗೂ ಅವಧಿಯನ್ನು ವಿಸ್ತರಿಸಿರುವುದಿಲ್ಲ. ಇದರಿಂದ ಆಡಳಿತಾತ್ಮಕವಾಗಿ ಬಹಳಷ್ಟು ಸಮಸ್ಯೆಗಳು ಉಂಟಾಗಿದ್ದು, ಇದಲ್ಲದೆ ನ್ಯಾಯಾಲಯದಲ್ಲಿ ದಾವೆ ಇನ್ನು ಇತ್ಯರ್ಥವಾಗಿಲ್ಲದ ಕಾರಣ ಸಂಸ್ಥೆಗೆ ಚುನಾವಣೆ ನಡೆಸಿ, ಅಧಿಕಾರ ಹಸ್ತಾಂತರಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ಈ ಸಂಸ್ಥೆಗೆ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ 19–9–2006 ರಿಂದ ಮುಂದಿನ ಆರು ತಿಂಗಳು, 19–3–2007 ರಿಂದ ಮುಂದಿನ ಆರು ತಿಂಗಳು, ದಿನಾಂಕ 19–9–2007 ರಿಂದ ಮುಂದಿನ ಆರು ತಿಂಗಳು ಹಾಗೂ 19–3–2008 ರಿಂದ ಮುಂದಿನ ಆರು ತಿಂಗಳವರೆಗೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ದಿನಾಂಕ 11–9–2008ರ ಪತ್ರದಲ್ಲಿ ಪ್ರಾಂಶುಪಾಲರು ಸೆಂಟ್ರಲ್ ಸಂಯುಕ್ತ ಪದವಿ ಪೂರ್ವ ಕಾಲೇಜು, ಊರ್ಡಿಗೆರೆ, ತುಮಕೂರು ಇವರು ಸಂಸ್ಥೆಯಲ್ಲಿ ಸುಮಾರು 25 ವರ್ಷಗಳಿಂದ ಕರ್ತವ್ಯ

ನಿರ್ವಹಿಸಲಾಗುತ್ತಿರುವ ಶಿಕ್ಷಕರ ಹಾಗೂ ನೌಕರರ ವೇತನ ಬಿಡುಗಡೆಯಾಗದೆ ತೀವ್ರ ಸಂಕಷ್ಟದಲ್ಲಿರುತ್ತಾರೆ. ಆದ್ದರಿಂದ ಮಾನವೀಯತೆ ದೃಷ್ಟಿಯಿಂದ ಶಿಕ್ಷಕರ ಮತ್ತು ನೌಕರರ ವೇತನ ಬಿಡುಗಡೆ ಮಾಡಲು ಅನುಕೂಲವಾಗುವಂತೆ ಆಡಳಿತಾಧಿಕಾರಿಗಳ ಅವಧಿಯನ್ನು ನ್ಯಾಯಾಲಯದ ಪ್ರಕರಣವು ಇತ್ಯರ್ಥವಾಗುವವರೆಗೆ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 20 ಸಸಂನೋ 2008, ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ 19–9–2006 ರಿಂದ ಮುಂದಿನ ಆರು ತಿಂಗಳು, 19–3–2007 ರಿಂದ ಮುಂದಿನ ಆರು ತಿಂಗಳು, ದಿನಾಂಕ 19–9–2007 ರಿಂದ ಮುಂದಿನ ಆರು ತಿಂಗಳು, ದಿನಾಂಕ 19–3–2008 ಹಾಗೂ ದಿನಾಂಕ 19–9–2008 ರಿಂದ ಮುಂದಿನ ಆರು ತಿಂಗಳವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದೂ ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1393

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಧೂಮಪಾನ ನಿಷೇಧ ಕಾಯ್ದೆಯನ್ನು ಅನುಷ್ಠಾನಗೊಳಿಸಲು ಜಿಲ್ಲಾ ತಂಬಾಕು ನಿಯಂತ್ರಣ ಘಟಕ ಮತ್ತು ತಂಬಾಕು ನಿಷೇಧ ಕೋಶಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 121 ಸಿಜಿಎಂ 2005, ದಿನಾಂಕ 9–7–2005.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 452 ಸಿಜಿಎಂ 2007, ದಿನಾಂಕ 27–9–2008.
3. ಆಯುಕ್ತರು, ಆಕುಕ ಸೇವೆಗಳು ಇವರ ಪತ್ರ ಸಂಖ್ಯೆ: ಸನಿ/ವೈ/ಧೂಮಪಾನ/8/08–09, ದಿನಾಂಕ 7–10–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಸಿಗರೇಟು ಮತ್ತು ಇತರೆ ತಂಬಾಕು ಉತ್ಪನ್ನಗಳ (ಜಾಹೀರಾತು ನಿಷೇಧ ಮತ್ತು ನಿಬಂಧನೆ, ವ್ಯಾಪಾರ ಮತ್ತು ವಾಣಿಜ್ಯ ಉತ್ಪಾದನೆ ಸರಬರಾಜು ಮತ್ತು ವಿತರಣೆ) ಕಾಯ್ದೆ 2003, (2003ರ ಕೇಂದ್ರ ಕಾಯ್ದೆ 34)ರ ಪ್ರಕರಣ 4 ಮತ್ತು 6ರ ಅಡಿಯಲ್ಲಿ ಅಪರಾಧ ಎಸಗಿದವರ ವಿರುದ್ಧ ಕ್ರಮ ಕೈಗೊಳ್ಳಲು ರಾಜ್ಯ, ಜಿಲ್ಲೆ ಮತ್ತು ತಾಲ್ಲೂಕು ಮಟ್ಟಗಳಲ್ಲಿ ಅಧಿಕೃತ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 27–9–2008ರ ಸರ್ಕಾರದ ಆದೇಶದಲ್ಲಿ ಭಾರತೀಯ ತಂಬಾಕು ನಿಯಂತ್ರಣ ಕಾಯ್ದೆ 2003ರ ಸೆಕ್ಷನ್ 5ರ ಉಲ್ಲಂಘನೆಯನ್ನು ತಡೆಯಲು ಈಗಾಗಲೇ ನೇಮಕ ಮಾಡಲಾದ ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕೃತ ಅಧಿಕಾರಿಗಳ ಕಾರ್ಯವೈಖರಿಯನ್ನು ಉಸ್ತುವಾರಿಗಾಗಿ ರಾಜ್ಯ ಮತ್ತು ಜಿಲ್ಲಾ ಮಟ್ಟದ ಉಸ್ತುವಾರಿ ಸಮಿತಿಗಳನ್ನು (Monitoring committies) ರಚಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಏಕಕಡತದಲ್ಲಿ ಸಿಗರೇಟು ಮತ್ತು ತಂಬಾಕು ಉತ್ಪನ್ನಗಳ ನಿಷೇಧ ಕಾಯ್ದೆ 2003ರ ಅನ್ವಯ ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ನಿಷೇಧಗೊಳಿಸುವ ಬಗ್ಗೆ ಮತ್ತು ದಿನಾಂಕ 30–5–2008 ರಂದು ಭಾರತ ರಾಜ್ಯಪತ್ರ ಪ್ರಕಟಣೆಯ ಪ್ರಕಾರ ದಿನಾಂಕ 2–10–2008 ರಿಂದ ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ಮಾಡುವುದನ್ನು ಸಂಪೂರ್ಣವಾಗಿ ನಿಷೇಧಿಸುವ ಆದೇಶವನ್ನು ಸಂಪೂರ್ಣವಾಗಿ ಜಾರಿಗೆ ತರಲು ರಾಜ್ಯದಲ್ಲಿ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಜಿಲ್ಲಾ ತಂಬಾಕು ನಿಯಂತ್ರಣ ಘಟಕ ಮತ್ತು ಜಿಲ್ಲಾ ತಂಬಾಕು ನಿಷೇಧ ಕೋಶ ಸ್ಥಾಪಿಸಲು ಪ್ರಸ್ತಾಪಿಸಿರುತ್ತಾರೆ.

**ಜಿಲ್ಲಾ ತಂಬಾಕು ನಿಯಂತ್ರಣ ಘಟಕ**

| | | |
|---|---|---|
| 1) | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2) | ಜಿಲ್ಲಾ ಆರಕ್ಷಕ ಅಧೀಕ್ಷಕರು | ಉಪಾಧ್ಯಕ್ಷರು |

| | | |
|---|---|---|
| 3) | ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು | ಸದಸ್ಯರು |
| 4) | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 5) | ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 6) | ಆರೋಗ್ಯ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುತ್ತಿರುವ ಎರಡು ಪ್ರಮುಖ ಸರ್ಕಾರೇತರ ಸ್ವಯಂ ಸೇವಾನಿರತ ಪ್ರತಿನಿಧಿಗಳು | ಸದಸ್ಯರು |
| 7) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿ |
| 8) | ಕೆಲವು ಪ್ರಮುಖ ಸಂಘ ಸಂಸ್ಥೆಗಳ ಪದಾಧಿಕಾರಿಗಳನ್ನು ಸದಸ್ಯರನ್ನಾಗಿ ಮಾಡಿಕೊಳ್ಳಬಹುದು. | |

**ಜಿಲ್ಲಾ ತಂಬಾಕು ನಿಷೇಧ ಕೋಶ**

| | | |
|---|---|---|
| 1) | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2) | ಜಿಲ್ಲಾ ಆರಕ್ಷಕ ಅಧೀಕ್ಷಕರು | ಉಪಾಧ್ಯಕ್ಷರು |
| 3) | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 4) | ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 5) | ಆರೋಗ್ಯ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುತ್ತಿರುವ ಎರಡು ಪ್ರಮುಖ ಸರ್ಕಾರೇತರ ಸ್ವಯಂ ಸೇವಾನಿರತ ಪ್ರತಿನಿಧಿಗಳು | ಸದಸ್ಯರು |
| 6) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿ |
| 7) | ಹೋಟೆಲ್ ಮಾಲೀಕರ ಸಂಘ ಹಾಗೂ ಪ್ರಮುಖ ಇತರೆ ಸಂಸ್ಥೆಗಳ ಪ್ರತಿನಿಧಿಗಳನ್ನು ಸದಸ್ಯರನ್ನಾಗಿ ಮಾಡಿಕೊಳ್ಳಬಹುದು. | |

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 452 ಸಿಜಿಎಂ 2007, ಬೆಂಗಳೂರು, ದಿನಾಂಕ: 12ನೇ ನವಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸಿಗರೇಟು ಮತ್ತು ತಂಬಾಕು ಉತ್ಪನ್ನಗಳ ನಿಷೇಧ ಕಾಯ್ದೆ 2003ರ ಅನ್ವಯ ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ನಿಷೇಧಗೊಳಿಸುವ ಬಗ್ಗೆ ಹೊರಡಿಸಿದ ಆದೇಶಗಳನ್ನು ಮತ್ತು ಕೇಂದ್ರ ಸರ್ಕಾರದ ದಿನಾಂಕ 30–5–2008ರ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶಗಳನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದಲ್ಲಿ ಈ ಕೆಳಕಂಡಂತೆ ಜಿಲ್ಲಾ ತಂಬಾಕು ನಿಯಂತ್ರಣ ಘಟಕ ಮತ್ತು ಜಿಲ್ಲಾ ತಂಬಾಕು ನಿಷೇಧ ಕೋಶಗಳನ್ನು ಸ್ಥಾಪಿಸಲು ಸರ್ಕಾರವು ಮಂಜೂರಾತಿ ನೀಡಿದೆ.

**ಜಿಲ್ಲಾ ತಂಬಾಕು ನಿಯಂತ್ರಣ ಘಟಕ**

| | | |
|---|---|---|
| 1) | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2) | ಜಿಲ್ಲಾ ಆರಕ್ಷಕ ಅಧೀಕ್ಷಕರು | ಉಪಾಧ್ಯಕ್ಷರು |
| 3) | ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು | ಸದಸ್ಯರು |
| 4) | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 5) | ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 6) | ಆರೋಗ್ಯ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುತ್ತಿರುವ ಎರಡು ಪ್ರಮುಖ ಸರ್ಕಾರೇತರ ಸ್ವಯಂ ಸೇವಾನಿರತ ಪ್ರತಿನಿಧಿಗಳು | ಸದಸ್ಯರು |
| 7) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿ |
| 8) | ಕೆಲವು ಪ್ರಮುಖ ಸಂಘ ಸಂಸ್ಥೆಗಳ ಪದಾಧಿಕಾರಿಗಳನ್ನು ಸದಸ್ಯರನ್ನಾಗಿ ಮಾಡಿಕೊಳ್ಳಬಹುದು. | |

**ಜಿಲ್ಲಾ ತಂಬಾಕು ಘಟಕ ನಿರ್ವಹಿಸಬೇಕಾದ ಕರ್ತವ್ಯ ಮತ್ತು ಜವಾಬ್ದಾರಿಗಳು**

1) ಸಭೆಯನ್ನು ಪ್ರತಿ ತಿಂಗಳು ನಡೆಸತಕ್ಕದ್ದು.
2) ದಂಡ ವಸೂಲಾತಿ ಮಾಡಲು ಅಗತ್ಯವಿರುವ ರಶೀದಿ ಪುಸ್ತಕಗಳನ್ನು ಕೋಶದ ವತಿಯಿಂದಲೇ ಮುದ್ರಿಸಿ ಅದರ ಸಂಬಂಧಪಟ್ಟ ಹಣ ಸಂಗ್ರಹ ಹಾಗೂ ಲೆಕ್ಕವನ್ನು ನಿರ್ವಹಿಸುವುದು.
3) ಸಾರ್ವಜನಿಕ ಸ್ಥಳಗಳಿಗೆ ಸಂಬಂಧಪಟ್ಟಂತೆ ಧೂಮಪಾನ ನಿಷೇಧ ಎಂಬುವ ಫಲಕಗಳನ್ನು ಹಾಕಿಸಲು ಹಾಗೂ ಈ ಕಾನೂನನ್ನು ಉಲ್ಲಂಘಿಸಿದವರ ವಿರುದ್ಧ ದೂರು ದಾಖಲಿಸಲು ಯಾರನ್ನು ಸಂಪರ್ಕಿಸಬೇಕೆಂದು ಬರೆಸಿರಬೇಕು.

4) ಎಲ್ಲಾ ಹೋಟೆಲ್ ಹಾಗೂ ರೆಸ್ಟೋರೆಂಟ್ ಮಾಲೀಕರು ಧೂಮಪಾನಕ್ಕಾಗಿ ಪ್ರತ್ಯೇಕ ಸ್ಥಳಾವಕಾಶವನ್ನು ರೂಲ್–2ಬಿ ಪ್ರಕಾರ ಕಲ್ಪಿಸಿಕೊಡುವುದು. ಯಾವ ಯಾವ ಸ್ಥಳಗಳನ್ನು ರೂಲ್–2(1) ಪ್ರಕಾರ ತೆರೆದ ಸ್ಥಳವೆಂದು ಈ ಕಾನೂನಿನ ಅಡಿಯಲ್ಲಿ ಕರೆಯುತ್ತಾರೆ ಎಂಬುದನ್ನು ಸಂಬಂಧಿಸಿದ ವ್ಯಕ್ತಿಗಳಿಗೆ ತಿಳಿಸತಕ್ಕದ್ದು.

5) ಸಂಬಂಧಪಟ್ಟ ಮಾಲೀಕರು/ಅಧಿಕಾರಿಗಳು ಇನ್ನುಳಿದಂತೆ ಧೂಮಪಾನ ನಿಷೇಧ ಕುರಿತು ಇರುವ ನಿಯಮಗಳು ಹಾಗೂ ಕಾನೂನನ್ನು ಅನುಸರಿಸುವುದು.

**ಜಿಲ್ಲಾ ತಂಬಾಕು ನಿಷೇಧ ಕೋಶ**

| | | |
|---|---|---|
| 1) | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2) | ಜಿಲ್ಲಾ ಆರಕ್ಷಕ ಅಧೀಕ್ಷಕರು | ಉಪಾಧ್ಯಕ್ಷರು |
| 3) | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 4) | ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 5) | ಆರೋಗ್ಯ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುತ್ತಿರುವ ಎರಡು ಪ್ರಮುಖ ಸರ್ಕಾರೇತರ ಸ್ವಯಂ ಸೇವಾನಿರತ ಪ್ರತಿನಿಧಿಗಳು | ಸದಸ್ಯರು |
| 6) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿ |
| 7) | ಹೋಟೆಲ್ ಮಾಲೀಕರ ಸಂಘ ಹಾಗೂ ಪ್ರಮುಖ ಇತರೆ ಸಂಸ್ಥೆಗಳ ಪ್ರತಿನಿಧಿಗಳನ್ನು ಸದಸ್ಯರನ್ನಾಗಿ ಮಾಡಿಕೊಳ್ಳಬಹುದು. | |

**ಜಿಲ್ಲಾ ತಂಬಾಕು ಘಟಕ ನಿರ್ವಹಿಸಬೇಕಾದ ಕರ್ತವ್ಯ ಮತ್ತು ಜವಾಬ್ದಾರಿಗಳು**

1) ಕನಿಷ್ಟ ತಿಂಗಳಿಗೊಮ್ಮೆ ಸಭೆ ನಡೆಸಿ ಅನುಷ್ಠಾನದ ಬಗ್ಗೆ ಕಡ್ಡಾಯವಾಗಿ ಕ್ರಮ ಕೈಗೊಳ್ಳತಕ್ಕದ್ದು.

2) ದಂಡವನ್ನು ವಸೂಲಿ ಮಾಡಲು ಅಗತ್ಯವಿರುವ ರಶೀದಿ ಪುಸ್ತಕಗಳನ್ನು ಕೋಶದ ವತಿಯಿಂದಲೇ ಮುದ್ರಿಸಿ ಕ್ರಮವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1621

**ಕೆ.ಎಸ್. ಸರೋಜಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರದಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ 'ಕರ್ನಾಟಕ ರಾಜ್ಯ ಪರಿಸರ' ಪ್ರಶಸ್ತಿ ನೀಡಲು ಆಯ್ಕೆ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ: ಅಪಜೀ 16 ಇಎನ್‌ಜಿ 2007, ದಿನಾಂಕ 16–9–2008.
2. ದಿನಾಂಕ 23–9–2008ರ ಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ :**

ರಾಜ್ಯದಲ್ಲಿ ಪರಿಸರ ಕ್ಷೇತ್ರಕ್ಕೆ ಮಹತ್ವ ನೀಡುವ ದೃಷ್ಟಿಯಿಂದ ಪರಿಸರ ಸಂರಕ್ಷಣೆಗಾಗಿ ವಿಶೇಷ ಸೇವೆ ಸಲ್ಲಿಸಿರುವ ವ್ಯಕ್ತಿ/ಸಂಸ್ಥೆಗಳಿಗೆ ಪರಿಸರ ಪ್ರಶಸ್ತಿಯನ್ನು ಸರ್ಕಾರವು ಪ್ರತಿ ವರ್ಷ ನೀಡುತ್ತಾ ಬಂದಿದೆ ಅದೇ ರೀತಿ 2008–09ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಅರ್ಜಿಗಳನ್ನು ಉಲ್ಲೇಖ (1)ರ ಪತ್ರದಲ್ಲಿನ ಪತ್ರಿಕಾ ಪ್ರಕಟಣೆಯ ಮೂಲಕ ಆಹ್ವಾನಿಸಲಾಗಿದೆ. ಪರಿಸರ ಸಂರಕ್ಷಣಾ ವ್ಯಕ್ತಿ/ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವುದು ಈ ಪ್ರಶಸ್ತಿಗಳ ಉದ್ದೇಶವಾಗಿದೆ. ಈ ಪ್ರಶಸ್ತಿ ತಲಾ ರೂ. 1,00,000/– (ಒಂದು ಲಕ್ಷ ರೂ.) ಮಾತ್ರ ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ ಟ್ರಸ್ಟ್‌ಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಆರಂಭ ಶೀಲತೆ/ಕೊಡುಗೆಯಲ್ಲಿ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ಪ್ರಶಸ್ತಿಗಳನ್ನು ರಾಜ್ಯದ ಮಲೆನಾಡು, ಮತ್ತು ಕರಾವಳಿ ವಲಯ, ಬೆಳಗಾವಿ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು ಕೊಡಗು, ಚಾಮರಾಜನಗರ, ಹಾಸನ, ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಮತ್ತು ಉಡುಪಿ ಜಿಲ್ಲೆಗಳು) ದಕ್ಷಿಣ ವಲಯ, ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು) ಮತ್ತು ಉತ್ತರ ವಲಯ (ದಾವಣಗೆರೆ, ಚಿತ್ರದುರ್ಗ, ಹಾವೇರಿ, ಧಾರವಾಡ, ಗದಗ್, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಬೀದರ್, ಗುಲ್ಬರ್ಗ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು) ಗಳಲ್ಲಿನ ತಲಾ ಒಬ್ಬರು ವ್ಯಕ್ತಿ ಮತ್ತು ಒಂದು ಸಂಸ್ಥೆ ಕೈಗಾರಿಕೆಗೆ ನೀಡಲಾಗುವುದು. ಪರಿಸರ ಪ್ರಶಸ್ತಿಗಾಗಿ

ಅರ್ಹರನ್ನು ಆಯ್ಕೆ ಮಾಡುವ ಸಲುವಾಗಿ ಸಮಿತಿಯನ್ನು ರಚಿಸಲು ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 16 ಇಎನ್‌ಜಿ 2007 (ಭಾ), ಬೆಂಗಳೂರು, ದಿನಾಂಕ: 19ನೇ ನವೆಂಬರ್ 2008.**

**(ಯುನಿಕ್ ಕ್ರಮ ಸಂಖ್ಯೆ: 29/2008)**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2008–09ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ನೀಡಲು, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳ ಅರ್ಹರನ್ನು ಆಯ್ಕೆ ಮಾಡಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಈ ಕೆಳಗಿನಂತೆ ಸಮಿತಿಯನ್ನು ರಚಿಸಲಾಗಿದೆ.

1) ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ –ಅಧ್ಯಕ್ಷರು

2) ಸರ್ಕಾರದ ಕಾರ್ಯದರ್ಶಿ,
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ –ಸದಸ್ಯರು

3) ಸರ್ಕಾರದ ಕಾರ್ಯದರ್ಶಿ (ಅರಣ್ಯ),
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ –ಸದಸ್ಯರು

4) ಡಾ: ಹೆಚ್.ಸಿ. ಶರತ್‌ಚಂದ್ರ,
ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ –ಸದಸ್ಯರು

5) ಸಿ.ಎಸ್. ವೇದಾಂತ್,
ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ,
ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು –ಸದಸ್ಯರು

6) ಡಾ: ಆರ್. ಪ್ರಜಾಪತಿ,
ಸದಸ್ಯ ಕಾರ್ಯದರ್ಶಿ, ಕರ್ನಾಟಕ ಜೀವ ವೈವಿಧ್ಯ ಮಂಡಳಿ, ಬೆಂಗಳೂರು –ಸದಸ್ಯರು

7) ಡಾ: ಬಿ. ಬಸಪ್ಪ,
ಮಹಾ ನಿರ್ದೇಶಕರು, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ
ಸಂಸ್ಥೆ, ಬೆಂಗಳೂರು –ಸದಸ್ಯರು

8) ಶ್ರೀ ಅನಂತ ಹೆಗ್ಗಡೆ ಆಶೀಸರ್,
ಅಧ್ಯಕ್ಷರು, ಸಹ್ಯಾದ್ರಿ ಟಾಸ್ಕ್ ಫೋರ್ಸ್ ಆನ್, ವೆಸ್ಟರನ್ ಘಾಟ್ಸ್
(ಚೀಫ್ ಕೋ ಆರ್ಡಿನೇಟರ್, ವೃಕ್ಷಲಕ್ಷ ಆಂದೋಲನ, ಪೋಸ್ಟ್–ಬೈರಂಬೆ,
ಶಿರಸಿ ತಾ: ಉತ್ತರ ಕನ್ನಡ ಜಿಲ್ಲೆ. –ಸದಸ್ಯರು

9) ಶ್ರೀ ವೈ.ಬಿ. ರಾಮಕೃಷ್ಣ,
ಅಧ್ಯಕ್ಷರು, ಜೈವಿಕ ಇಂಧನ ಕಾರ್ಯಪಡೆ, ಸಮಗ್ರ ವಿಕಾಸ, ಬೆಂಗಳೂರು
(390, 5ನೇ ಮುಖ್ಯ ರಸ್ತೆ, 12ನೇ ಅಡ್ಡ ರಸ್ತೆ, ಮಹಾಲಕ್ಷ್ಮೀಪುರಂ,
ಬೆಂಗಳೂರು –ಸದಸ್ಯರು

10) ಶ್ರೀ ಎಸ್.ಎಂ. ಪುಟ್ಟಬುದ್ದಿ,
ಹಿರಿಯ ನಿರ್ದೇಶಕರು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ –ಸದಸ್ಯ ಕಾರ್ಯದರ್ಶಿ

ಸದರಿ ಸಮಿತಿಯ ಕಾರ್ಯ ಅವಧಿಯು ಪ್ರಸಕ್ತ ಸಾಲಿಗೆ ಮಾತ್ರ ಅನ್ವಯಿಸುತ್ತದೆ. ಸಮಿತಿಯ ತನ್ನ ಶಿಫಾರಸ್ಸನ್ನು ದಿನಾಂಕ 30–12–2008ರೊಳಗೆ ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1623

**ಎನ್.ಆರ್. ಜಗನ್ನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಸುವರ್ಣ ವಸ್ತ್ರ ನೀತಿ 2008–13 ಅನುಷ್ಠಾನಗೊಳಿಸಲು ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ವಾಕೈ 47 ಜಕೈಯೋ 2008, ದಿ: 1–10–2008.

2. ಜವಳಿ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರವರ ಪತ್ರ ಸಂ: ಡಿಹೆಚ್‌ಟಿ/ಟೆಕ್ಸ್/ಟಿಪಿಒ–1/ಕೆಎಪಿ/ 2008–09, ದಿನಾಂಕ 3–11–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ 1ರ ಸರ್ಕಾರದ ಆದೇಶದಲ್ಲಿ 2008–13ನೇ ಸಾಲಿನಲ್ಲಿ ಸುವರ್ಣ ವಸ್ತ್ರ ನೀತಿಯನ್ನು ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ 2ರಲ್ಲಿ ಜವಳಿ ಅಭಿವೃದ್ಧಿ ಆಯುಕ್ತರು ಸುವರ್ಣ ವಸ್ತ್ರ ನೀತಿ 2008–13ರ ಯೋಜನೆಯನ್ನು ಅನುಷ್ಠಾನಗೊಳಿಸಲು ಸಮಿತಿಗಳನ್ನು ರಚಿಸಲು ಕೋರಿರುತ್ತಾರೆ. ಸದರಿ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 25 ಜಕೈಇ 2008, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2008.**

2008–13ನೇ ಸಾಲಿನಲ್ಲಿ ಸುವರ್ಣ ವಸ್ತ್ರ ನೀತಿಯನ್ನು ಅನುಷ್ಠಾನಗೊಳಿಸಲು ಸರ್ಕಾರವು ಈ ಕೆಳಕಂಡಂತೆ ಸಮಿತಿಗಳನ್ನು ರಚಿಸಿದೆ.

**1. ಉನ್ನತ ಮಟ್ಟದ ಅಧಿಕಾರಯುಕ್ತ ಸಮಿತಿ (ಹೆಚ್.ಎಲ್.ಇ.ಸಿ.)**

| | | |
|---|---|---|
| 1 | ಮಾನ್ಯ ಜವಳಿ ಸಚಿವರು, ಕರ್ನಾಟಕ ಸರ್ಕಾರ, ಬೆಂಗಳೂರು | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು (ಜವಳಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು | ಸದಸ್ಯರು |
| 3 | ಸರ್ಕಾರದ ಕಾರ್ಯದರ್ಶಿಗಳು, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆ, ಬೆಂಗಳೂರು | ಸದಸ್ಯರು |
| 4 | ಸರ್ಕಾರದ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯಗಳು, ಬೆಂಗಳೂರು | ಸದಸ್ಯರು |
| 5 | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ ಮತ್ತು ಕನ್‌ವಿನಿಯರ್ |
| 6 | ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು | ಸದಸ್ಯರು |
| 7 | ಕಾರ್ಮಿಕ ಇಲಾಖಾ ಆಯುಕ್ತರು, ಬೆಂಗಳೂರು | ಸದಸ್ಯರು |
| 8 | ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ಬೆಂಗಳೂರು | ಸದಸ್ಯರು |
| 9 | ಆಯುಕ್ತರು, ರೇಷ್ಮೆ ಇಲಾಖೆ, ಬೆಂಗಳೂರು | ಸದಸ್ಯರು |
| 10 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಮಗ್ಗ ಅಭಿವೃದ್ಧಿ ನಿಗಮ ನಿ., ಬೆಂಗಳೂರು | ಸದಸ್ಯರು |
| 11 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಣಕಾಸು ನಿಗಮ ನಿ., ಬೆಂಗಳೂರು | ಸದಸ್ಯರು |
| 12 | ವ್ಯವಸ್ಥಾಪಕ ನಿರ್ದೇಶಕರು, ವಿದ್ಯುತ್ ಪ್ರಕರಣಾ ನಿಗಮ ನಿ., ಬೆಂಗಳೂರು | ಸದಸ್ಯರು |
| 13 | ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು | ಸದಸ್ಯರು |
| 14 | ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು | ಸದಸ್ಯರು |
| 15 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿ., ಬೆಂಗಳೂರು | ಸದಸ್ಯರು |
| 16 | ನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು | ಸದಸ್ಯರು |

| | | |
|---|---|---|
| 17 | ನಿರ್ದೇಶಕರು, ನ್ಯಾಷನಲ್ ಇನ್ಸಿಟ್ಯೂಟ್ ಆಫ್ ಫ್ಯಾಷನ್ ಟೆಕ್ನಾಲಜಿ, ಬೆಂಗಳೂರು | ಸದಸ್ಯರು |
| 18 | ಸರ್ಕಾರದ ಉಪ ಕಾರ್ಯದರ್ಶಿಗಳು (ಜವಳಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು | ಸದಸ್ಯರು |
| 19 | ಸರ್ಕಾರದ ಉಪ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ, ಬೆಂಗಳೂರು | ಸದಸ್ಯರು |
| 20 | ಸರ್ಕಾರದ ಉಪ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬೆಂಗಳೂರು | ಸದಸ್ಯರು |
| 21 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು | ಸದಸ್ಯರು |
| 22 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ ನಿ.., ಬೆಂಗಳೂರು | ಸದಸ್ಯರು |
| 23 | ಯೋಜನಾ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು | ಸದಸ್ಯರು |
| 24 | ಜಂಟಿ ನಿರ್ದೇಶಕರು, ಅಪೆರಲ್ ಎಕ್ಸ್‌ಪೋರ್ಟ್ ಪ್ರಮೋಷನಲ್ ಕೌನ್ಸಿಲ್, ಬೆಂಗಳೂರು | ಸದಸ್ಯರು |
| 25 | ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ಹ್ಯಾಂಡ್ ಲೂಮ್ಸ್, ಬೆಂಗಳೂರು | ಸದಸ್ಯರು |
| 26 | ಉಪ ನಿರ್ದೇಶಕರು, ನೇಕಾರರ ಸೇವಾ ಕೇಂದ್ರ, ಬೆಂಗಳೂರು | ಸದಸ್ಯರು |
| 27 | ಉಪ ನಿರ್ದೇಶಕರು, ಜವಳಿ ಆಯುಕ್ತರ ಪ್ರಾಂತೀಯ ಕಚೇರಿ, ಜವಳಿ ಮಂತ್ರಾಲಯ, ಭಾರತ ಸರ್ಕಾರ, ಬೆಂಗಳೂರು | ಸದಸ್ಯರು |
| 28 | ರಾಜ್ಯ ಅಗ್ರಣೀಯ ಬ್ಯಾಂಕ್ ಅಧಿಕಾರಿ, ಸಿಂಡಿಕೇಟ್ ಬ್ಯಾಂಕ್ ಬೆಂಗಳೂರು | ಆಹ್ವಾನಿತರು |

ಸದರಿ ಅಧಿಕಾರಯುಕ್ತ ಸಮಿತಿಯು ಸುವರ್ಣ ವಸ್ತ್ರ ನೀತಿ ಯೋಜನೆಯ ಅನುಷ್ಠಾನ ಹಾಗೂ ಮೇಲ್ವಿಚಾರಣೆ ಮತ್ತು ಅನುದಾನ ಹಾಗೂ ಅನುದಾನದ ಮರುವಿಂಗಡಣೆ, ಅನುದಾನದ ಉಪಯುಕ್ತತೆ ಹಾಗೂ ಸೂಕ್ತ ಸಲಹೆಗಳನ್ನು ನೀಡುವ ಅಧಿಕಾರವನ್ನು ಹೊಂದಿದ್ದು, ಸದರಿ ಸಮಿತಿಯು ಪ್ರತಿ ಆರು ತಿಂಗಳಿಗೊಮ್ಮೆ ಸಭೆ ಸೇರಿ ಚರ್ಚಿಸುವುದು.

**2. ರಾಜ್ಯ ಮಟ್ಟದ ಯೋಜನಾ ಅನುಷ್ಠಾನ ಸಮಿತಿ (ಎಸ್.ಎಲ್.ಪಿ.ಐ.ಸಿ.)**

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿಗಳು (ಜವಳಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು | ಅಧ್ಯಕ್ಷರು |
| 2 | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ ಮತ್ತು ಕನ್‌ವೀನಿಯರ್ |
| 3 | ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು | ಸದಸ್ಯರು |
| 4 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿ., ಬೆಂಗಳೂರು | ಸದಸ್ಯರು |
| 5 | ಸರ್ಕಾರದ ಉಪ ಕಾರ್ಯದರ್ಶಿಗಳು (ಜವಳಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು | ಸದಸ್ಯರು |
| 6 | ರಾಜ್ಯ ಅಗ್ರಣೀಯ ಬ್ಯಾಂಕ್ ವ್ಯವಸ್ಥಾಪಕರು, ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು | ಸದಸ್ಯರು |
| 7 | ಯೋಜನಾ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು | ಸದಸ್ಯರು |
| 8 | ಉಪ ನಿರ್ದೇಶಕರು, ಜವಳಿ ಆಯುಕ್ತರ ಪ್ರಾಂತೀಯ ಕಚೇರಿ, ಜವಳಿ ಮಂತ್ರಾಲಯ, ಭಾರತ ಸರ್ಕಾರ, ಬೆಂಗಳೂರು | ಸದಸ್ಯರು |
| 9 | ಜಂಟಿ ನಿರ್ದೇಶಕರು, ಅಪೆರಲ್ ಎಕ್ಸಪೋರ್ಟ್ ಪ್ರಮೋಷನಲ್ ಕೌನ್ಸಿಲ್, ಬೆಂಗಳೂರು | ಸದಸ್ಯರು |

ರಾಜ್ಯ ಮಟ್ಟದ ಯೋಜನಾ ಮಟ್ಟದ ಸಮಿತಿಯು ಸುವರ್ಣ ವಸ್ತ್ರ ನೀತಿ ಯೋಜನೆಯ ಅಭಿವೃದ್ಧಿ ಅನುದಾನ ಹಾಗೂ ಮೇಲ್ವಿಚಾರಣೆಯ ಅಧಿಕಾರವನ್ನು ಹೊಂದಿದ್ದು, ಸದರಿ ಸಭೆಯು ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಚರ್ಚಿಸುವುದು.

**3. ಜಿಲ್ಲಾ ಮಟ್ಟದ ಯೋಜನಾ ಉಸ್ತುವಾರಿ ಸಮಿತಿ (ಡಿ.ಎಲ್.ಪಿ.ಎಂ.ಸಿ.)**

| | | |
|---|---|---|
| 1 | ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ | ಸದಸ್ಯರು |
| 3 | ಸಹಾಯಕ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ | ಸದಸ್ಯರು |
| 4 | ಕೈಮಗ್ಗ ಮತ್ತು ಜವಳಿ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿ ಮತ್ತು ಕನ್‌ವೀನಿಯರ್ |
| 5 | ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿ., | ಸದಸ್ಯರು |
| 6 | ಜಿಲ್ಲಾ ಅಗ್ರಣೀಯ ಬ್ಯಾಂಕ್ ವ್ಯವಸ್ಥಾಪಕರು | ಸದಸ್ಯರು |
| 7 | ಜಿಲ್ಲಾ ಅಧಿಕಾರಿಗಳು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ | ಸದಸ್ಯರು |

ಸದರಿ ಜಿಲ್ಲಾ ಮಟ್ಟದ ಯೋಜನಾ ಉಸ್ತುವಾರಿ ಸಮಿತಿಯು ರಾಜ್ಯ ಮಟ್ಟದ ಯೋಜನಾ ಅನುಷ್ಠಾನ ಸಮಿತಿಯಿಂದ ಅನುಮೋದನೆಗೊಂಡ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ಹಾಗೂ ಯೋಜನೆಯ ಪ್ರಗತಿಯ ಬಗ್ಗೆ ಮೇಲ್ವಿಚಾರಣೆ ವಹಿಸುವುದು ಹಾಗೂ ಸದರಿ ಸಮಿತಿಯು ಪ್ರತಿ ಎರಡು ತಿಂಗಳಿಗೊಮ್ಮೆ ಸಭೆ ಸೇರಿ ಚರ್ಚಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1622

**ಸಿ. ರವಿಕುಮಾರ್**
ಪೀಠಾಧಿಕಾರಿ (ಜವಳಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತದಲ್ಲಿ ಗುತ್ತಿಗೆ ಆಧಾರದ ಮೇಲೆ ಎರಡು ಪಶುವೈದ್ಯಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಮಾಕೋಮಾನಿನಿ/ಪವೈ/2008–09/38, ದಿನಾಂಕ 8–4–2008.
2. ಸರ್ಕಾರದ ಪತ್ರ ಸಂಖ್ಯೆ: ಪಸಂಮೀ 113 ಪಸಸೇ 2008, ದಿನಾಂಕ 15–4–2008.
3. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ–2/ವಿವ–14/2005–06, ದಿನಾಂಕ 23–6–2008.
4. ಸರ್ಕಾರದ ಪತ್ರ ಸಂಖ್ಯೆ: ಪಸಂಮೀ 113 ಪಸಸೇ 2008, ದಿನಾಂಕ 7–8–2008.
5. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪಸಂ/ಸಿಬ್ಬಂದಿ–2/ವಿವ–14/2005–06, ದಿನಾಂಕ 16–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ, ಬೆಂಗಳೂರು, ಇವರು ಪ್ರಾಣಿಗಳ ಅನಧಿಕೃತ ವಧೆಗೆ ಸಂಬಂಧಿಸಿದಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಭಾಗಿತ್ವದಲ್ಲಿ ಕಾನೂನುಗಳನ್ನು ಜಾರಿಗೊಳಿಸಲು ನಿಗಮಕ್ಕೆ ಇಬ್ಬರು ಪಶುವೈದ್ಯಾಧಿಕಾರಿಗಳ ಸೇವೆಯನ್ನು ಗುತ್ತಿಗೆ ಆಧಾರದಲ್ಲಿ ಕ್ರೋಢೀಕೃತ ವೇತನ ರೂ. 12,000–00ರಲ್ಲಿ ಔಟ್‌ಸೋರ್ಸ್ ಮೂಲಕ ಪಡೆಯಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (2)ರ ಪತ್ರದಲ್ಲಿ ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಇಬ್ಬರು ಪಶುವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದಲ್ಲಿ ಕ್ರೋಢೀಕೃತ ವೇತನ ರೂ. 12,000–00ರಲ್ಲಿ ಔಟ್‌ಸೋರ್ಸ್ ಮೂಲಕ ಪಡೆಯುವ ಅವಶ್ಯಕತೆ ಕುರಿತು ಸ್ಪಷ್ಟ ಅಭಿಪ್ರಾಯದೊಂದಿಗೆ ವರದಿ ಸಲ್ಲಿಸುವಂತೆ ಆಯುಕ್ತರನ್ನು ಕೋರಲಾಗಿತ್ತು.

ಮೇಲೆ ಓದಲಾದ ಉಲ್ಲೇಖ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ ಕಾರ್ಯನಿರ್ವಹಿಸುತ್ತಿರುವ ಟ್ಯಾನರಿ ರಸ್ತೆ, ಉಸ್ಮಾನ್‌ಖಾನ್ ರಸ್ತೆಗಳಲ್ಲಿರುವ ಕಸಾಯಿಖಾನೆಗಳಲ್ಲಿ ಜಾನುವಾರುಗಳು, ಮೇಕೆಗಳು ಮತ್ತು ಹಂದಿಗಳನ್ನು ಅನಧಿಕೃತವಾಗಿ ವಿಧಿಸಲಾಗುತ್ತಿದ್ದು, ಇದಲ್ಲದೇ 2 ರಿಂದ 5 ಪಟ್ಟು ಅನಧಿಕೃತವಾಗಿ ವಿವಿಧೆಡೆ ಪ್ರಾಣಿಗಳನ್ನು ವಧೆ ಮಾಡಲಾಗುತ್ತಿರುವ ಬಗ್ಗೆ ಮಾಹಿತಿ ಇರುವುದರಿಂದ, ಪ್ರಾಣಿಗಳ ಅನಧಿಕೃತ ವಧೆಗೆ ಸಂಬಂಧಿಸಿದಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಭಾಗಿತ್ವದಲ್ಲಿ ಹಲವಾರು ಕಾನೂನುಗಳನ್ನು ಜಾರಿಗೊಳಿಸಲು ನಿಗಮಕ್ಕೆ ಇಬ್ಬರು ಪಶುವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳುವುದು ಅವಶ್ಯಕವಾಗಿರುತ್ತದೆಂದು ತಿಳಿಸಿರುತ್ತಾರೆ. ಈ ಬಗ್ಗೆ ನಿಗಮದ ವ್ಯವಸ್ಥಾಪಕ ಮಂಡಳಿಯ (Board of Directors) ಸಭೆಯಲ್ಲಿ ಇಬ್ಬರು ಪಶುವೈದ್ಯಾಧಿಕಾರಿಗಳ ಸೇವೆಯನ್ನು ತಿಂಗಳಿಗೆ ರೂ. 12,000–00 ಸಂಚಿತ ವೇತನದ ಮುಖಾಂತರ 179 ದಿನಗಳಿಗೆ ಗುತ್ತಿಗೆ ಆಧಾರದ ಮೇಲೆ ಬಾಹ್ಯ ಮೂಲದಿಂದ (Out Source) ಸರ್ಕಾರದ ಅನುಮೋದನೆ ಪಡೆದು ನೇಮಿಸಿಕೊಳ್ಳಲು ತೀರ್ಮಾನಿಸಲಾಗಿದ್ದು, ಪಶುವೈದ್ಯಾಧಿಕಾರಿಗಳ ಗುತ್ತಿಗೆ ನೇಮಕಾತಿಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದ ಭರಿಸಲಾಗುವುದೆಂದು ವ್ಯವಸ್ಥಾಪಕ ನಿರ್ದೇಶಕರು ತಿಳಿಸಿದ್ದು, ನಿಗಮದ ವೃಂದ ಮತ್ತು ನೇಮಕಾತಿ ನಿಯಮಗಳ ನಿಯಮದನ್ವಯ ಅವಕಾಶವಿರುವುದರಿಂದ ಭರ್ತಿಮಾಡದಿದ್ದಲ್ಲಿ 1 ವರ್ಷ ಅವಧಿಯವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಬಹುದಾಗಿದ್ದು, ಪಶುಪಾಲನಾ ಇಲಾಖೆಯ ವತಿಯಿಂದ ಪ್ರತಿ ನಿಯೋಜನೆ ಮೇರೆಗೆ ನಿಗಮಕ್ಕೆ ನೇಮಿಸಿದಲ್ಲಿ ಅಂದಾಜು ರೂ. 6.00 ಲಕ್ಷ ವೆಚ್ಚವಾಗಲಿದ್ದು, ಗುತ್ತಿಗೆ ಆಧಾರದ ಮೇಲೆ ಪಶುವೈದ್ಯಾಧಿಕಾರಿಗಳನ್ನು ನೇಮಿಸುವುದರಿಂದ, ರೂ. 2.40 ಲಕ್ಷ ವೆಚ್ಚವಾಗಲಿರುವುದರಿಂದ ನಿಗಮಕ್ಕೆ ರೂ. 3.60 ಲಕ್ಷ ಉಳಿತಾಯವಾಗಲಿದೆ. ಆದ್ದರಿಂದ, ಇಬ್ಬರು ಪಶುವೈದ್ಯಾಧಿಕಾರಿಗಳಿಗೆ ರೂ. 12,000–00ಗಳ ಸಂಚಿತ ವೇತನವನ್ನು ಒಂದು ವರ್ಷದವರೆಗೆ ಸಂಬಂಧಪಟ್ಟ ಸಂಸ್ಥೆಯಿಂದ ಭರಿಸುವ ನಿಬಂಧನೆಗೊಳಪಟ್ಟು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (4)ರ ಪತ್ರದಲ್ಲಿ ಇಬ್ಬರು ಪಶುವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ನಿಗಮಕ್ಕೆ ಮಂಜೂರಾದ ಪಶುವೈದ್ಯಾಧಿಕಾರಿ ಹುದ್ದೆಗಳಿಗೆ ಎದುರಾಗಿ ನೇಮಕ ಮಾಡಿಕೊಳ್ಳಲಾಗುತ್ತಿದೆಯೆ ಹಾಗೂ ಸರ್ಕಾರದ ವತಿಯಿಂದ ನಿಗಮಕ್ಕೆ ವೇತನಾನುದಾನ ನೀಡಲಾಗುತ್ತಿದೆಯೇ ಎಂಬ ಬಗ್ಗೆ ಮಾಹಿತಿ ಒದಗಿಸುವಂತೆ ಆಯುಕ್ತರನ್ನು ಕೋರಲಾಗಿತ್ತು.

ಮೇಲೆ ಓದಲಾದ ಉಲ್ಲೇಖ (5)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು ನಿಗಮದಲ್ಲಿ ಒಟ್ಟು 5 ಪಶುವೈದ್ಯಾಧಿಕಾರಿ ಹುದ್ದೆಯಲ್ಲಿ 3 ಖಾಲಿ ಇದ್ದು, ಇಬ್ಬರು ಪಶುವೈದ್ಯಾಧಿಕಾರಿಗಳು ಮಾತ್ರ ಕಾರ್ಯನಿರ್ವಹಿಸುತ್ತಿದ್ದು, ನಿಗಮಕ್ಕೆ ಮಂಜೂರಾದ ಹುದ್ದೆಗಳಿಗೆ ಎದುರಾಗಿ ಇಬ್ಬರು ಪಶುವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಬಹುದಾಗಿದೆ ಹಾಗೂ ನಿಗಮಕ್ಕೆ ಸರ್ಕಾರದ ವತಿಯಿಂದ ವೇತನಾನುದಾನ ನೀಡಲಾಗುತ್ತಿದೆ ಎಂದು ತಿಳಿಸಿ, ನಿಗಮಕ್ಕೆ ಇಬ್ಬರು ಪಶುವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 113 ಪಸಸೇ 2007, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ, ಪ್ರಾಣಿಗಳ ಅನಧಿಕೃತ ವಧೆಗೆ ಸಂಬಂಧಿಸಿದಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಭಾಗಿತ್ವದಲ್ಲಿ ಹಲವಾರು ಕಾನೂನುಗಳನ್ನು ಸಮರ್ಪಕವಾಗಿ ಜಾರಿಗೊಳಿಸಲು ಕರ್ನಾಟಕ ಕೋಳಿ ಮತ್ತು ಮಾಂಸ ಮಾರಾಟ ನಿಗಮ ನಿಯಮಿತದಲ್ಲಿ ಖಾಲಿ ಇರುವ ಮೂರು ಪಶುವೈದ್ಯಾಧಿಕಾರಿಗಳ ಹುದ್ದೆಗಳ ಪೈಕಿ ಎರಡು ಹುದ್ದೆಗಳಿಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–15ರ ಪ್ರಕಾರ ಸರ್ಕಾರದ ನಿರ್ದೇಶನಗಳ ಅನ್ವಯ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಷರತ್ತಿಗೊಳೊಪಟ್ಟು ಮಾಸಿಕ ರೂ. 12,000–00 (ರೂಪಾಯಿ ಹನ್ನೆರಡು ಸಾವಿರ ಮಾತ್ರ) ಸಂಚಿತ ವೇತನದ ಆಧಾರದ ಮೇಲೆ 179 ದಿನಗಳ ಅವಧಿಗೆ ಮಾತ್ರ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಅನುಮೋದನೆ ನೀಡಿ ಆದೇಶಿಸಿದೆ.

ಗುತ್ತಿಗೆ ಆಧಾರಿತ ನೇಮಕಾತಿಯಿಂದ ಉಂಟಾಗುವ ಹೆಚ್ಚು ವೆಚ್ಚವನ್ನು ನಿಗಮದ ಆದಾಯದ ಮಿತಿಯಲ್ಲಿಯೇ ಭರಿಸಬೇಕೆಂದೂ, ಇದಕ್ಕಾಗಿ ಸರ್ಕಾರದಿಂದ ಹೆಚ್ಚಿನ ಅನುದಾನ ಕೋರಬಾರದೆಂದು ಸಹ ಸೂಚಿಸಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ, ಬೆಂಗಳೂರು, ಇವರು ಈ ಬಗ್ಗೆ ಕರ್ನಾಟಕ ರಾಜ್ಯಪತ್ರ, ಪ್ರಮುಖ ದಿನಪತ್ರಿಕೆಗಳಲ್ಲಿ ಹಾಗೂ ಸಮೂಹ ಮಾಧ್ಯಮದಲ್ಲಿ ಪ್ರಕಟಣೆ ನೀಡುವಂತೆಯೂ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 438 ವೆಚ್ಚ–4/08, ದಿನಾಂಕ 16–10–2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ)

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 113 ಪಸಸೇ 2007, ಬೆಂಗಳೂರು, ದಿನಾಂಕ 7–11–2008ಕ್ಕೆ ಅನುಬಂಧ**

1) ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತದಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಗೆ ಗುತ್ತಿಗೆ ಮೇಲೆ ನೇಮಕಗೊಂಡಿರುವ ಡಾ: .............................. ರವರ ಗುತ್ತಿಗೆ ನೇಮಕಾತಿ 179 (ಒಂದು ನೂರ ಎಪ್ಪತ್ತೊಂಭತ್ತು) ದಿನಗಳ ಅವಧಿವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.

2) ಡಾ: ...................... ರವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 12,000–00ಗಳ (ರೂಪಾಯಿ ಹನ್ನೆರಡು ಸಾವಿರ ಮಾತ್ರ) ಸಂಚಿತ ವೇತನವನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಮಾತ್ರ ಪಡೆಯಲು ಅರ್ಹರಿರುತ್ತಾರೆಯೇ ಹೊರತು ಬೇರೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.

3) ಗುತ್ತಿಗೆ ಪಶುವೈದ್ಯಾಧಿಕಾರಿಗಳು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೆಚ್ಚವನ್ನು ನಿಗಮದ ಅನುದಾನದಿಂದಲೇ ಭರಿಸತಕ್ಕದ್ದು.

4) ಗುತ್ತಿಗೆ ಪಶುವೈದಾಧಿಕಾರಿಗಳು ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಅರ್ಹರಾಗಿರುವುದಿಲ್ಲ.

5) ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅವರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ನಿಗಮಕ್ಕೆ/ಸರ್ಕಾರಕ್ಕೆ ಭರಿಸಿಕೊಡಲು ಬದ್ಧರಾಗಿರತಕ್ಕದ್ದು.

6) ಗುತ್ತಿಗೆ ಪಶುವೈದ್ಯಾಧಿಕಾರಿಗಳ ಮರು ನೇಮಕಾತಿಯ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತರ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

7) ಗುತ್ತಿಗೆ ಪಶುವೈದ್ಯಾಧಿಕಾರಿಗಳು ಅವರ ಕರ್ತವ್ಯ – ಜವಾಬ್ದಾರಿ ಹಾಗೂ ಅವರಿಗೆ ವಹಿಸಿರುವ ಕಾರ್ಯ – ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ನೆರವೇರಿಸುವುದು.

8) ಗುತ್ತಿಗೆ ಪಶುವೈದ್ಯಾಧಿಕಾರಿಗಳ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ಕರ್ತವ್ಯ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

9) ಗುತ್ತಿಗೆ ಪಶುವೈದ್ಯಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ಕ್ಕೆ ಬದ್ದರಾಗಿರತಕ್ಕದ್ದು.

10) ಗುತ್ತಿಗೆ ಪಶುವೈದ್ಯಾಧಿಕಾರಿಗಳು ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ಯಾವುದೇ ಮುನ್ಸೂಚನೆ ಇಲ್ಲದೇ ತಾನಾಗಿಯೇ ರದ್ದಾಗುತ್ತದೆ.

11) ಗುತ್ತಿಗೆ ಪಶುವೈದ್ಯಾಧಿಕಾರಿಗಳು ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ನಿಗಮಕ್ಕೆ ಸಂಬಂಧಿಸಿದಂತೆ ಉಂಟುಮಾಡುವ ಆರ್ಥಿಕ ನಷ್ಟವನ್ನು ನಿಗಮಕ್ಕೆ ತುಂಬಿಕೊಡಲು ಹೊಣೆಗಾರರಾಗಿರುತ್ತಾರೆ.

12) ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಗುತ್ತಿಗೆ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು

ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಗುತ್ತಿಗೆ ಪಶುವೈದ್ಯಾಧಿಕಾರಿಗಳಿಂದ ಬರೆಸಿಕೊಳ್ಳತಕ್ಕದ್ದು.

**ಎಂ.ಪಿ. ನಾಗರಾಜ**

ಪಿ.ಆರ್. 1589

ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

## ಸಮಾಜ ಕಲ್ಯಾಣ ಸಚಿವಾಲಯ

**ಸಂಖ್ಯೆ: ಸಕಇ 125 ಎಸ್ಎಡಿ 2007, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2008.**

**ಸುತ್ತೋಲೆ**

ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದವರು ಅಂತರಜಾತಿ ವಿವಾಹವಾದಲ್ಲಿ ಅವರ ಮಕ್ಕಳಿಗೆ ಯಾವ ರೀತಿಯಲ್ಲಿ ಜಾತಿ ಪ್ರಮಾಣ ಪತ್ರಗಳನ್ನು ನೀಡಬೇಕೆಂಬ ಬಗ್ಗೆ ಭಾರತ ಸರ್ಕಾರದ ಪತ್ರ ಸಂಖ್ಯೆ: 39/37/73/ACT–I, ದಿನಾಂಕ 21–5–77ರಲ್ಲಿ ನೀಡಿದ ಮಾರ್ಗಸೂಚನೆಗಳನ್ವಯ ಜಾತಿ ಪ್ರಮಾಣ ಪತ್ರಗಳನ್ನು ನೀಡುವಂತಹ ಪ್ರಾಧಿಕಾರಗಳು ತಂದೆ ಅಥವಾ ತಾಯಿ ಈ ಇಬ್ಬರಲ್ಲಿ ಯಾರಾದರೊಬ್ಬರು ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದವರಾಗಿದ್ದಲ್ಲಿ ಅವರ ಮಕ್ಕಳಿಗೆ ಆಯಾ ಜಾತಿಗಳ ಪ್ರಮಾಣ ಪತ್ರ ನೀಡುವುದು ಸಿಂಧುವಾಗಿದೆ. ಆದಾಗ್ಯೂ ಜಾತಿ ಪ್ರಮಾಣ ಪತ್ರಗಳನ್ನು ನೀಡುವಂತಹ ಪ್ರಾಧಿಕಾರಿಗಳು ಇಂತಹ ಪ್ರಕರಣಗಳು ಬಂದಾಗ ತಾಯಿಯ ಜಾತಿ ಪರಿಗಣಿಸದೆ ತಂದೆಯ ಜಾತಿ ಮಾತ್ರ ಪರಿಗಣಿಸಿ ಜಾತಿ ಪ್ರಮಾಣ ಪತ್ರ ನೀಡಲಾಗುತ್ತಿದೆ ಎಂದು ತಿಳಿದು ಬಂದಿದೆ. ಪ್ರಮಾಣ ಪತ್ರಗಳನ್ನು ನೀಡುವಾಗ ಅರ್ಜಿದಾರರ ತಾಯಿಯ ಜಾತಿಯನ್ನು ಸಹಾ ಪರಿಗಣಿಸಿ ಪ್ರಮಾಣ ಪತ್ರ ಕೊಡಬೇಕೆಂದು ತಿಳಿಸಿ, ಈ ಪತ್ರದನ್ವಯ ಕ್ರಮ ಕೈಗೊಳ್ಳುವಂತೆ ಸರ್ಕಾರದ ಸುತ್ತೋಲೆ ಸಂಖ್ಯೆ: ಸಕಇ 185 ಎಸ್ಎಡಿ 02, ದಿನಾಂಕ 8–10–2002ರಲ್ಲಿ ಸೂಚನೆ ನೀಡಲಾಗಿತ್ತು.

ಆದರೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಶ್ರೀ ಪುನೀತ್ ರೈ ವರ್ಸಸ್ ದಿನೇಶ್ ಚೌಧರಿ [(2003)8 SCC 2004] ಪ್ರಕರಣವನ್ನು ದಿನಾಂಕ 19–8–03ರಂದು ಇತ್ಯರ್ಥಪಡಿಸುತ್ತಾ, ಅಂತರಜಾತಿ ವಿವಾಹವಾದ ದಂಪತಿಗಳ ಮಕ್ಕಳಿಗೆ ಜಾತಿ ಪ್ರಮಾಣ ಪತ್ರವನ್ನು ತಂದೆಯ ಜಾತಿಯನ್ನು ಅನುಸರಿಸಿ, ನೀಡಬೇಕೆಂದು ಆದೇಶಿಸಿದೆ. ಆದ್ದರಿಂದ, ಸರ್ಕಾರದ ಮೇಲ್ಕಂಡ ದಿನಾಂಕ 8–10–02ರ ಸುತ್ತೋಲೆಯನ್ನು ಹಿಂದಕ್ಕೆ ಪಡೆದು, ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ 19–8–03ರಂದು ನೀಡಿದ ಆದೇಶದನ್ವಯ ಅಂತರಜಾತಿ ವಿವಾಹವಾದ ದಂಪತಿಗಳ ಮಕ್ಕಳಿಗೆ ಜಾತಿ ಪ್ರಮಾಣ ಪತ್ರವನ್ನು ತಂದೆಯ ಜಾತಿಯನ್ನು ಮಾತ್ರ ಆಧರಿಸಿ ನೀಡಬೇಕೆಂದು ಜಾತಿ ಪ್ರಮಾಣ ಪತ್ರವನ್ನು ನೀಡುವ ಸಕ್ಷಮ ಪ್ರಾಧಿಕಾರಗಳಿಗೆ ಈ ಮೂಲಕ ಸೂಚನೆ ನೀಡಲಾಗಿದೆ. ಈ ಸುತ್ತೋಲೆಯನ್ನು ಸಂವಿಧಾನದ Article 162ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ. ಸದರಿ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಕೆ. ಸುಬ್ಬಯ್ಯ**

ಪಿ.ಆರ್.1487

ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಮಾಜ ಕಲ್ಯಾಣ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ. ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ. ಧಾರವಾಡ ಉಪ ವಿಭಾಗ, ಹುಬ್ಬಳ್ಳಿ–ಧಾರವಾಡ ರವರು ಅಕ್ರಮ ಆಸ್ತಿ ಹೊಂದಿರುವವರೆಂಬ ಕರ್ನಾಟಕ ಲೋಕಾಯುಕ್ತ ರವರ ವರದಿ – ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂ–28/ಸಿಆರ್–10/2008/ಮೈಸೂರು ದಿನಾಂಕ 16–08–2008.

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ ಶ್ರೀ. ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ. ಧಾರವಾಡ ಉಪ ವಿಭಾಗ, ಹುಬ್ಬಳ್ಳಿ–ಧಾರವಾಡ ರವರು ನಿಗಧಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದರ ಬಗ್ಗೆ ಖಚಿತ ಮಾಹಿತಿಯ ಹಿನ್ನೆಲೆಯಲ್ಲಿ ಅವರ ವಿರುದ್ಧ ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊ.ಸಂ.10/2008ರ ಕಲಂ 13(1)(ಇ) r/w 13(2)ರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ರೀತ್ಯಾ ಪ್ರಕರಣವನ್ನು ದಾಖಲಿಸಿಕೊಳ್ಳಲಾಯಿತು. ದಾಖಲಿಸಿಕೊಂಡ ನಂತರ ದಿನಾಂಕ 06–08–2008ರಂದು ಜಿಲ್ಲಾ ಪ್ರಧಾನ ಸತ್ರ ಮತ್ತು ವಿಶೇಷ ನ್ಯಾಯಾಲಯ, ಮೈಸೂರು ರವರಿಂದ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು

ಪಡೆದುಕೊಂಡು ದಿನಾಂಕ 07–08–2008 ರಂದು ಆರೋಪಿತರ ಮನೆ, ತೋಟದ ಮನೆ, ಕಛೇರಿ ಮತ್ತು ಅವರು ತಾತ್ಕಾಲಿಕವಾಗಿ ವಾಸಿಸುತ್ತಿರುವ ಧಾರವಾಡದ ಪೊಲೀಸ್ ಭವನದ ಕೊಠಡಿ ಮುಂತಾದ ಸ್ಥಳಗಳ ಮೇಲೆ ಪಂಚಸಾಕ್ಷಿಗಳ ಸಕ್ಷಮ ಶೋಧಿಸಿದಾಗ ಅಪಾರ ಮೊತ್ತದ ಸ್ಥಿರ–ಚರಾಸ್ಥಿ ದೊರೆತಿರುತ್ತವೆ. ಪ್ರಾಥಮಿಕ ತನಿಖೆಯಿಂದ ಆರೋಪಿತರು ಅವರ ಬಲ್ಲ ಮೂಲಗಳಿಗಿಂತ ಹೊಂದಿರುವ ಅಕ್ರಮ ಆಸ್ತಿಗಳ ಮೌಲ್ಯ ರೂ.2,53,25,709=00 ಆಗಿರುತ್ತದೆ. ಸದರಿ ಹೆಚ್ಚುವರಿ ಅಕ್ರಮ ಮೂಲಗಳಿಂದ ಗಳಿಸಿರುವ ಚರ–ಸ್ಥಿರ ಆಸ್ತಿಗಳ ಮೌಲ್ಯವು ಆರೋಪಿತ ಸರ್ಕಾರಿ ನೌಕರ ಶೋಧನಾ ಅವಧಿಯಲ್ಲಿ ನಿಗಧಿತ ಮೂಲಗಳಿಂದ ಗಳಿಸಿರುವ ವರಮಾನಕ್ಕಿಂತ ಹೆಚ್ಚಿನ ಮೊತ್ತವಾಗಿರುತ್ತದೆ. ಅಲ್ಲದೆ, ಆರೋಪಿತರು, ವಿವಿಧ ಬಾಬ್ತುಗಳಿಗಾಗಿ ಮಾಡಿರುವ ಖರ್ಚು–ವೆಚ್ಚಗಳು ಇನ್ನೂ ಕೆಲವು ಮೂಲಗಳಿಂದ ಬರಬೇಕಾಗಿದೆ. ಇದರಿಂದ ಭವಿಷ್ಯದಲ್ಲಿ ಪ್ರಕರಣದ ತನಿಖೆ ಮುಂದುವರೆದಂತೆ ಹೆಚ್ಚಿನ ಚರ–ಸ್ಥಿರಾಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟಾರೆ ಮೌಲ್ಯವು ಇನ್ನೂ ಹೆಚ್ಚಾಗುವ ಸಂಭವವಿರುತ್ತದೆ. ಈ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ದಾಖಲೆ / ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತೆ ಹಾಗೂ ಅವರ ಲೀನ್ ಅನ್ನು ಬೇರೆಡೆಗೆ ಸ್ಥಳಾಂತರಿಸುವಂತೆ ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆ ಹಾಗೂ ವರದಿಗಳನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 299 ಪೊಸಿಪ 2008, ಬೆಂಗಳೂರು, ದಿನಾಂಕ 18ನೇ ನವೆಂಬರ್ 2008.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ. ಸಿ. ಕೃಷ್ಣಪ್ಪ, (ಹಿಂದೆ ಡಿವೈ.ಎಸ್.ಪಿ. ಧಾರವಾಡ ಉಪ ವಿಭಾಗ, ಹುಬ್ಬಳ್ಳಿ–ಧಾರವಾಡ) ಪ್ರಸ್ತುತ ಸಹಾಯಕ ನಿರ್ದೇಶಕರು, ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ. ಇವರ ಲೀನ್ ಅನ್ನು ಡಿ.ಸಿ.ಆರ್.ಬಿ. ಚಿತ್ರದುರ್ಗ ಇಲ್ಲಿನ ಡಿವೈ.ಎಸ್.ಪಿ. ಹುದ್ದೆಗೆ ಸ್ಥಳಾಂತರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ. ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ. ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಶ್ರೀ. ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ. ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1614

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಸಿಬ್ಬಂದಿ ಆಡಳಿತ ಮತ್ತು ಸುಧಾರಣಾ ಸಚಿವಾಲಯ

## ಸೇರ್ಪಡೆ

**ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್‌ಎಲ್ 2007, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2008**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20: 25: 26 ಪಿಯುಬಿ 1, ದಿನಾಂಕ 15–6–1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್ 1881ರ (1881ರ ಅಧಿನಿಯಮ ಸಂ. 26) 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ "ಭಕ್ತ ಕನಕದಾಸ ಜಯಂತಿ" ಆಚರಣೆ ಪ್ರಯುಕ್ತ ದಿನಾಂಕ 15–11–2008ರ ಶನಿವಾರದಂದು ಹೆಚ್ಚುವರಿಯಾಗಿ ಕರ್ನಾಟಕ ರಾಜ್ಯದಾದ್ಯಂತ ಸಾರ್ವಜನಿಕ ರಜೆಯನ್ನು ಸರ್ಕಾರವು ಘೋಷಿಸಿದೆ. ಈ ರಜೆಯನ್ನು ಸರ್ಕಾರದ ಅಧಿಸೂಚನೆ–2ರ ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್‌ಎಲ್ 2007, ದಿನಾಂಕ 4–12–2007ರಲ್ಲಿಯ ಕ್ರಮಸಂಖ್ಯೆ 15ರ ಕೆಳಗೆ ಕ್ರಮಸಂಖ್ಯೆ 15–ಎ ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1617

**ಕೆ.ವಿ. ರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ರಾಜ್ಯ ಶಿಷ್ಟಾಚಾರ–1)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಹಾಲು ಸಹಕಾರ ಸಂಘಗಳಿಗೆ ಹಾಲನ್ನು ಒದಗಿಸುತ್ತಿರುವ ರಾಜ್ಯದಲ್ಲಿನ ಹೈನುಗಾರರಿಗೆ ರೂ. 2.00ರಂತೆ ಪ್ರೋತ್ಸಾಹ ಧನವನ್ನು ನೀಡುವ ಯೋಜನೆ ಬಗ್ಗೆ – ಧ್ಯೇಯೋದ್ದೇಶಗಳು, ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 53 ಕಹಾಮ 2008, ದಿನಾಂಕ 8–9–2008.
2. ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 53 ಕಹಾಮ 2008, ದಿನಾಂಕ 26–9–2008.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 8–9–2008ರ ಸರ್ಕಾರಿ ಆದೇಶದಲ್ಲಿ, ಸಹಕಾರ ಹಾಲು ಸಂಘಗಳಿಗೆ ಹಾಲನ್ನು ಒದಗಿಸುತ್ತಿರುವ ಇಡೀ ರಾಜ್ಯದಲ್ಲಿನ ಹೈನುಗಾರರಿಗೆ ರೂ. 2.00ರಂತೆ ಪ್ರೋತ್ಸಾಹ ಧನವನ್ನು ನೀಡುವ ಯೋಜನೆಯನ್ನು ದಿನಾಂಕ 9–9–2008ರಿಂದ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ 26–9–2008ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಹಾಲು ಮಹಾಮಂಡಳಿಯ ಅಧೀನದಲ್ಲಿರುವ 13 ಜಿಲ್ಲಾ ಹಾಲು ಒಕ್ಕೂಟಗಳಿಗೆ ರಾಜ್ಯದ ಹಾಲು ಉತ್ಪಾದಕರಿಗೆ ಪ್ರೋತ್ಸಾಹ ಧನ ನೀಡಲು ಶೇ. 25ರಷ್ಟು ಭಾಗವಾದ ರೂ. 3250.00 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿರುತ್ತದೆ.

**ಆದೇಶ ಸಂಖ್ಯೆ: ಪಸಂಮೀ 53 ಕಹಾಮ 2008, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2008.**

ಈ ಬಗ್ಗೆ ಹಾಲು ಉತ್ಪಾದಕರ ಸಹಕಾರ ಸಂಘಗಳಿಗೆ ಹಾಲನ್ನು ಒದಗಿಸುತ್ತಿರುವ ಇಡೀ ರಾಜ್ಯದಲ್ಲಿನ ಹೈನುಗಾರರಿಗೆ ರೂ. 2.00ರಂತೆ ಪ್ರೋತ್ಸಾಹ ಧನವನ್ನು ನೀಡುವ ಬಗ್ಗೆ ಯೋಜನಾ ರೂಪುರೇಷೆಗಳನ್ನು, ಧ್ಯೇಯೋದ್ದೇಶಗಳನ್ನು ಮತ್ತು ನಿಬಂಧನೆಗಳನ್ನು ಅನುಬಂಧ–1 ರಲ್ಲಿ ಸೂಚಿಸಿರುವಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದ ಜೊತೆಗೆ ಸೇರ್ಪಡಿಸಿಕೊಂಡು ಓದತಕ್ಕದ್ದು ಹಾಗೂ ಸದರಿ ನಿಬಂಧನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ)

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 53 ಕಹಾಮ 2008, ದಿನಾಂಕ 8–9–2008ಕ್ಕೆ ಅನುಬಂಧ–1**

**1. ಧ್ಯೇಯೋದ್ದೇಶಗಳು:**

1. ಗ್ರಾಮೀಣ ರೈತ ಕುಟುಂಬಗಳು ವಿಶೇಷವಾಗಿ ಮಹಿಳೆಯರು/ಸಣ್ಣ/ಅತಿಸಣ್ಣ ರೈತರು/ಕೃಷಿ ಕಾರ್ಮಿಕರು/ ಹೈನುಗಾರಿಕೆ ಲಾಭದಾಯಕವಾಗಿಸುವುದು.
2. ಗ್ರಾಮೀಣ ಯುವಕರು ಹೈನುಗಾರಿಕೆ ಅವಲಂಬಿಸಿ ಉದ್ಯೋಗ ಕೈಗೊಳ್ಳಲು ಮತ್ತು ನಗರಕ್ಕೆ ವಲಸೆ ಹೋಗುವುದನ್ನು ತಪ್ಪಿಸುವುದು.
3. ರೈತರ ಸಾಮಾಜಿಕ ಆರ್ಥಿಕ ಸ್ಥಿತಿ ಉತ್ತಮಗೊಳಿಸುವುದು.
4. ಹಾಲು ಉತ್ಪಾದನೆ ಹೆಚ್ಚಿಸುವುದು ಹಾಗೂ ಆಹಾರ ಸುಭದ್ರತೆ ಒದಗಿಸಲು ಸಹಕಾರಿಯಾಗುವುದು.
5. ಸಹಕಾರ ತತ್ವದಲ್ಲಿ ಹೈನುಗಾರಿಕೆ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದು.

**2. ಫಲಾನುಭವಿಗಳು:**

1. ಹಾಲು ಉತ್ಪಾದಕರ ಸಹಕಾರ ಸಂಘಗಳಿಗೆ ಹಾಲು ಹಾಕುವ ಎಲ್ಲಾ ಹಾಲು ಉತ್ಪಾದಕರು/ಸಣ್ಣ/ಅತಿಸಣ್ಣ/ ರೈತರು/ಕೃಷಿ ಕಾರ್ಮಿಕರು/ಪರಿಶಿಷ್ಟ ಜಾತಿ/ ಪಂಗಡದವರು ಹಾಗೂ ಮಹಿಳೆಯರು ಸೇರಿದಂತೆ ಆದರೆ ಹಾಲಿನ ದಳ್ಳಾಳಿಗಳಿಗೆ (ಹಾಲನ್ನು ಉತ್ಪಾದಕರಿಂದ ಪಡೆದು ಮಾರಾಟ ಮಾಡುವವರು) ಹಾಲು ಸರಬರಾಜು ಮಾಡುತ್ತಿರುವ ಹೈನುಗಾರರನ್ನು ಹೊರತುಪಡಿಸಿದೆ.
2. ಡಾ: ನಂಜುಂಡಪ್ಪರವರ ವರದಿ ಅನ್ವಯ ಶಿಫಾರಸು ಮಾಡಲಾದ ಹಿಂದುಳಿದ/ ಹೆಚ್ಚು ಹಿಂದುಳಿದ/ ಅತಿ ಹೆಚ್ಚು ಹಿಂದುಳಿದ ತಾಲ್ಲೂಕುಗಳಿಗೆ ಆದ್ಯತೆ ನೀಡುವುದು.
3. ಪರಿಶಿಷ್ಟ ಜಾತಿ/ಪಂಗಡದ ಹಾಲು ಉತ್ಪಾದಕರ ಸದಸ್ಯರುಗಳಿಗೆ ಆದ್ಯತೆ ನೀಡುವುದು.
4. ಮಹಿಳಾ ಫಲಾನುಭವಿಗಳಿಗೆ ಶೇ. 33.1% ಸಾಧ್ಯವಾದ ಎಲ್ಲೆಡೆ ಕಾಯ್ದಿರಿಸುವುದು.

**3. ಯೋಜನಾ ಅನುಷ್ಠಾನ ಸಂಸ್ಥೆ:**

ಸದರಿ ಯೋಜನೆಯನ್ನು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಹಾಗೂ ಜಿಲ್ಲಾ ಸಹಕಾರ ಹಾಲು ಉತ್ಪಾದಕರ ಒಕ್ಕೂಟಗಳ ಮೂಲಕ ಅನುಷ್ಠಾನಗೊಳಿಸುವುದು.

ಈ ಯೋಜನೆಯನ್ನು ಗ್ರಾಮೀಣ ಮಟ್ಟದಲ್ಲಿ ಹಾಲು ಉತ್ಪಾದಕರ ಸಹಕಾರಿ ಸಂಘಗಳ ಕಾರ್ಯದರ್ಶಿಗಳು, ತಾಲ್ಲೂಕು ಮಟ್ಟದಲ್ಲಿ ಪಶುಸಂಗೋಪನಾ ಇಲಾಖೆಯ ಸಹಾಯಕ ನಿರ್ದೇಶಕರುಗಳು ಮತ್ತು ಜಿಲ್ಲಾ ಸಹಕಾರ ಹಾಲು ಒಕ್ಕೂಟಗಳಿಗೆ ಸೇರಿದ ಜಿಲ್ಲಾ ಉಪ ನಿರ್ದೇಶಕರುಗಳು ಹಾಗೂ ಜಿಲ್ಲಾ ಸಹಕಾರ ಹಾಲು ಒಕ್ಕೂಟಗಳ ವ್ಯವಸ್ಥಾಪಕ ನಿರ್ದೇಶಕರುಗಳು ಮತ್ತು ರಾಜ್ಯ ಮಟ್ಟದಲ್ಲಿ ಪಶುಸಂಗೋಪನಾ ಇಲಾಖೆಯ ಆಯುಕ್ತರು/ ನಿರ್ದೇಶಕರು ಹಾಗೂ ಕರ್ನಾಟಕ ಹಾಲು ಮಹಾ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರುಗಳು ಈ ಯೋಜನೆಯ ಅನುಷ್ಠಾನ ಅಧಿಕಾರಿಗಳಾಗಿರುತ್ತಾರೆ.

**4. ಯೋಜನಾ ವ್ಯಾಪ್ತಿ:**

ಈ ಯೋಜನೆ ವ್ಯಾಪ್ತಿಯಲ್ಲಿ ರಾಜ್ಯದ ಎಲ್ಲಾ 29 ಜಿಲ್ಲೆಗಳು ಒಳಗೊಂಡಿರುತ್ತದೆ.

**5. ಯೋಜನಾ ಅನುಷ್ಠಾನ ವಿವರ:**

1. ಈ ಯೋಜನೆಯನ್ನು ಕರ್ನಾಟಕ ಸಹಕಾರ ಕಾಯ್ದೆ ಅನ್ವಯ ನೊಂದಾಯಿತ ಹಾಲು ಉತ್ಪಾದಕರ ಸಹಕಾರ ಸಂಘಗಳ ಮೂಲಕ ಅನುಷ್ಠಾನಗೊಳಿಸಲಾಗುವುದು. ಈ ಸಂಸ್ಥೆಗಳು ಜಿಲ್ಲಾ ಸಹಕಾರ ಹಾಲು ಒಕ್ಕೂಟಗಳಿಗೆ ಸಂಯೋಜಿತವಾಗಿರಬೇಕು. (affliation) ಈ ಜಿಲ್ಲಾ ಸಹಕಾರ ಹಾಲು ಒಕ್ಕೂಟಗಳು ರಾಜ್ಯ ಹಾಲು ಮಹಾ ಮಂಡಳಿಗೆ ಸಂಯೋಜಿತವಾಗಿರಬೇಕು.
2. ಹಾಲು ಉತ್ಪಾದಕರ ಸಹಕಾರ ಸಂಘವು ಪ್ರತ್ಯೇಕವಾಗಿ ರಿಜಿಸ್ಟರ್‌ಗಳನ್ನು ನಿರ್ವಹಣೆ ಮಾಡಬೇಕಿದ್ದು ಅದರಲ್ಲಿ ಹಾಲು ಸ್ವೀಕರಿಸಿದ ಪ್ರಮಾಣ, ಹಾಲು ಉತ್ಪಾದಕರ ವರ್ಗಾವಾರು ವಿವರಗಳನ್ನು ನಮೂದಿಸುವುದು. (ಸಣ್ಣ/ಅತಿಸಣ್ಣ ರೈತರು/ ಕೃಷಿ ಕಾರ್ಮಿಕರು/ಪರಿಶಿಷ್ಟ ಜಾತಿ/ಪಂಗಡದವರು ಹಾಗೂ ಮಹಿಳೆಯರು ಇತರೆ) ಪ್ರತಿ ತಿಂಗಳೂ ಸ್ವೀಕರಿಸಿದ ಹಾಲಿನ ಪ್ರಮಾಣದಂತೆ ಪ್ರೋತ್ಸಾಹ ಧನದ ನಿಗಧಿತ ನಮೂನೆಯಲ್ಲಿ ಕ್ಲೈಂ ಬಿಲ್ಲನ್ನು ಸಿದ್ದಪಡಿಸಿ ಸಂಬಂಧಿಸಿದ ಸಂಘದ ಕಾರ್ಯದರ್ಶಿ ಸಹಿಯೊಂದಿಗೆ ಜಿಲ್ಲಾ ಸಹಕಾರ ಹಾಲು ಒಕ್ಕೂಟಕ್ಕೆ ಸಲ್ಲಿಸುವುದು.
3. ಜಿಲ್ಲಾ ಸಹಕಾರ ಹಾಲು ಒಕ್ಕೂಟಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಹಾಲು ಉತ್ಪಾದಕರ ಸಹಕಾರ ಸಂಘಗಳು ಸಲ್ಲಿಸಿದ ಪ್ರೋತ್ಸಾಹ ಧನದ ಬಿಲ್ಲನ್ನು ಕ್ರೋಢೀಕರಿಸಿ ತಯಾರಿಸಿ ಪ್ರತಿ ತಿಂಗಳಿನ 10ನೇ ತಾರೀಖಿನಂದು ಹಿಂದಿನ ತಿಂಗಳಿಗೆ ಸಂಬಂಧಿಸಿದ ಪ್ರೋತ್ಸಾಹ ಧನದ ಬಾಬ್ತು ಪೇಯೀಸ್ ರಶೀದಿ (payees receipt) ಕ್ಲೈಂ ಮಾಡಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸುವುದು.
4. ಆಯುಕ್ತಾಲಯ, ಪಶುಪಾಲನಾ ಮತ್ತು ಪಶುವೈದ್ಯ ಇಲಾಖೆ, ಬೆಂಗಳೂರು ಇಲ್ಲಿ ಸ್ವೀಕೃತವಾದ ಜಿಲ್ಲಾ ಹಾಲು ಒಕ್ಕೂಟಗಳ ಪೇಯೀಸ್ ರಶೀದಿಗಳನ್ನು ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಿ ಚೆಕ್ ಮೂಲಕ ಹಣ ಪಾವತಿಸಲು ಕ್ರಮ ಕೈಗೊಳ್ಳುವುದು.
5. ಜಿಲ್ಲಾ ಸಹಕಾರಿ ಹಾಲು ಒಕ್ಕೂಟಗಳು ಸಂಬಂಧಿಸಿದ ಹಾಲು ಉತ್ಪಾದಕರ ಸಹಕಾರಿ ಸಂಘಗಳಿಗೆ ಬ್ಯಾಂಕ್ ಚೆಕ್‌ಗಳ ಮೂಲಕ ಪ್ರೋತ್ಸಾಹ ಧನವನ್ನು ಪಾವತಿಸಲು ಕ್ರಮ ಕೈಗೊಳ್ಳುವುದು. ಜಿಲ್ಲಾ ಹಾಲು ಒಕ್ಕೂಟಗಳ ಪ್ರೋತ್ಸಾಹ ಧನ ಬಿಲ್ಲುಗಳು ಸರ್ಕಾರದಿಂದ ಬಿಡುಗಡೆಯಾಗುವ ಅನುದಾನದ ಮಿತಿಗೆ ಒಳಪಟ್ಟಿರುತ್ತದೆ.
6. ಹಾಲು ಉತ್ಪಾದಕರ ಸಹಕಾರ ಸಂಘದ ಕಾರ್ಯದರ್ಶಿಯು ರೈತರು ನೀಡಿದ ಹಾಲಿನ ಪ್ರಮಾಣದ ಅನುಸಾರ ನೀಡಬೇಕಾದ ಪ್ರೋತ್ಸಾಹ ಧನವನ್ನು ಸಾಧ್ಯವಾದಷ್ಟು ಮಟ್ಟಿಗೆ ಅದರಲ್ಲೂ ಮಹಿಳಾ ಸದಸ್ಯರಿಗೆ ಬ್ಯಾಂಕ್ ಖಾತೆಯ ಮೂಲಕ ಹಣ ಪಾವತಿಸಲು ಕ್ರಮ ವಹಿಸಬೇಕಾಗುವುದು.

ಸದರಿ ಯೋಜನೆಯನ್ನು ದಿನಾಂಕ 9–9–2008 ರಿಂದ 31–3–2009 ರವರೆಗೆ ಮೊದಲ ಹಂತದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು. ಯೋಜನೆಯ ಮಾರ್ಗದರ್ಶಿ ಸೂಚಿಗಳು ಕೆಳಕಂಡಂತಿವೆ.

1. ಹಾಲು ಉತ್ಪಾದಕರ ಸಹಕಾರ ಸಂಘಕ್ಕೆ ಹಾಲು ಪೂರೈಸುವ ಹಾಲು ಉತ್ಪಾದಕರ ರೈತರುಗಳು ಬ್ಯಾಂಕ್‌ನಲ್ಲಿ ಖಾತೆ ತೆರೆಯುವಂತೆ ಕ್ರಮ ವಹಿಸುವುದು.
2. ಜಿಲ್ಲಾ ಲೀಡ್ ಬ್ಯಾಂಕ್ ಮ್ಯಾನೇಜರುಗಳು ಜಿಲ್ಲೆಯ ಸಂಬಂಧಿಸಿದ ಎಲ್ಲಾ ಬ್ಯಾಂಕ್‌ಗಳಿಗೆ ಖಾತೆ ತೆರೆಯಲು ಹಾಗೂ ಅವಶ್ಯಕ ಸಹಕಾರ ನೀಡಲು ಸೂಕ್ತ ನಿರ್ದೇಶನ ನೀಡುವುದು.
3. ಸದರಿ ಯೋಜನೆಯಡಿಯಲ್ಲಿ ಲೆಕ್ಕಪತ್ರ ಹಾಗೂ ದಾಖಲಾತಿಗಳನ್ನು ನಿರ್ವಹಿಸುವ ಆಯಾ ಹಾಲು ಉತ್ಪಾದಕರ ಸಹಕಾರ ಸಂಘದ ಕಾರ್ಯದರ್ಶಿಯವರದ್ದಾಗಿರುತ್ತದೆ ಹಾಗೂ ಇದಕ್ಕೆ ಸಂಬಂಧಿಸಿದಂತೆ ರಾಜ್ಯ

ಸರ್ಕಾರ/ ಪಶುಸಂಗೋಪನಾ ಇಲಾಖೆ/ ಕರ್ನಾಟಕ ಹಾಲು ಮಹಾಮಂಡಳಿ ಅಥವಾ ನಿಯಂತ್ರಣ ಇಲಾಖೆಯವರು ಬಯಸಿದ್ದಲ್ಲಿ ಸಂಬಂಧಿಸಿದ ದಾಖಲಾತಿಗಳನ್ನು ಹಾಜರುಪಡಿಸಲು ಕಾರ್ಯದರ್ಶಿಯು ಜವಾಬ್ದಾರರಾಗಿರುತ್ತಾರೆ. ತಪ್ಪಿದಲ್ಲಿ ಅಂತಹ ಅಧಿಕಾರಿಯ ವಿರುದ್ಧ ಕಾನೂನು ರೀತ್ಯಾ/ಕಾಲಕಾಲಕ್ಕೆ ರಾಜ್ಯ ಸರ್ಕಾರ ಹೊರಡಿಸುವ ನಿರ್ದೇಶನ ರೀತ್ಯಾ ಶಿಸ್ತಿನ ಕ್ರಮಕ್ಕೆ ಒಳಪಡಿಸಬಹುದಾಗಿರುತ್ತದೆ.

**6. ಯೋಜನಾ ಹಣಕಾಸು ನಿರ್ವಹಣೆ ವಿವರಗಳು:**

2008–09ನೇ ಸಾಲಿಗೆ ರಾಜ್ಯ ಆಯವ್ಯಯದಲ್ಲಿ ರೂ. 130.00 ಕೋಟಿ ನಿಗದಿ ಪಡಿಸಲಾಗಿದ್ದು, ಅದರಲ್ಲಿ ವಿಶೇಷ ಅಭಿವೃದ್ಧಿ ಕಾರ್ಯಕ್ರಮದಡಿ ಡಾ: ನಂಜುಂಡಪ್ಪರವರ ಅಸಮತೋಲನ ನಿವಾರಣ ವರದಿ ಅನ್ವಯ ರೂ. 50.00 ಕೋಟಿಗಳನ್ನು ಹಂಚಿಕೆ ಮಾಡಲಾಗಿದ್ದು ಅದರಂತೆ ಹಿಂದುಳಿದ/ ಹೆಚ್ಚು ಹಿಂದುಳಿದ/ ಅತಿ ಹೆಚ್ಚು ಹಿಂದುಳಿದ ತಾಲ್ಲೂಕುಗಳಿಗೆ ಪ್ರತಿ ಲೀಟರ್‌ಗೆ ಪ್ರೋತ್ಸಾಹ ಧನ ರೂ. 2.00 ರಂತೆ ಆದ್ಯತೆ ನೀಡುವುದು. ಆದರೆ ಈ ಯೋಜನೆಯಡಿಯಲ್ಲಿ ಉಳಿತಾಯವಾಗುವ ಪ್ರೋತ್ಸಾಹ ಧನವನ್ನು ಇನ್ನಿತರೆ ತಾಲ್ಲೂಕುಗಳಿಗೂ ಹಂಚಿಕೆ ಮಾಡಿ ಕಾರ್ಯಕ್ರಮ ಅನುಷ್ಠಾನಗೊಳಿಸುವುದು.

**7. ಯೋಜನಾ ಮೇಲ್ವಿಚಾರಣೆ ಪರಿಶೀಲನೆ ಮತ್ತು ಮೌಲ್ಯ ಮಾಪನ:**

ಯೋಜನೆಯನ್ನು ಮೇಲ್ವಿಚಾರಣೆ ಪರಿಶೀಲನೆ ಮೌಲ್ಯ ಮಾಪನ ಮಾಡಲು ರಾಜ್ಯ ಮಟ್ಟದಲ್ಲಿ ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ 3 ಸಮಿತಿಗಳನ್ನು ರಚಿಸುವುದು.

**1. ರಾಜ್ಯ ಮಟ್ಟದ ಸಮಿತಿ:**

| | | |
|---|---|---|
| 1 | ಪ್ರಧಾ ಕಾರ್ಯದರ್ಶಿ, ಪಶುಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2 | ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 3 | ಕಾರ್ಯದರ್ಶಿಗಳು, ಆರ್ಥಿಕಕ ಇಲಾಖೆ, (ಆಯವ್ಯಯ ಮತ್ತು ಸಂಪನ್ಮೂಲ) | ಸದಸ್ಯರು |
| 4 | ಕಾರ್ಯದರ್ಶಿಗಳು, ಗ್ರಾಮೀಣ ಅಭಿವೃದ್ಧಿ (ಡಿಆರ್‌ಡಿಪಿ) ಪಂಚಾಯತ್ ರಾಜ್ಯ | ಸದಸ್ಯರು |
| 5 | ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ | ಸದಸ್ಯರು |
| 6 | ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 7 | ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಇಲಾಖೆ | ಸದಸ್ಯರು |
| 8 | ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಇಲಾಖೆ | ಸದಸ್ಯರು |
| 9 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಾಲು ಮಹಾ ಮಂಡಳಿ | ಸದಸ್ಯರು |
| 10 | ಅಪರ ನಿರ್ದೇಶಕರು, (ಜಾನುವಾರು ಆರೋಗ್ಯ) | ಸಂಚಾಲಕರು |

**ಸಮಿತಿ ಕರ್ತವ್ಯಗಳು:**

1. ಯೋಜನೆಯ ಮೇಲ್ವಿಚಾರಣೆ, ಪ್ರಗತಿ ಪರಿಶೀಲನೆ ಮತ್ತು ಮೌಲ್ಯಮಾಪನ ಇತ್ಯಾದಿಗಳನ್ನೊಳಗೊಂಡಂತೆ ಯೋಜನೆ ಅನುಷ್ಠಾನದ ಬಗ್ಗೆ ಕಾರ್ಯ ನಿರ್ವಹಿಸುವುದು.
2. ಯೋಜನೆಯ ಅನುಷ್ಠಾನ ಸಂಸ್ಥೆಗಳಿಗೆ ಅನುಷ್ಠಾನದ ಬಗ್ಗೆ ಆಗಿಂದಾಗ್ಗೆ ಸಲಹೆ ನೀಡುವುದು.
3. ಯೋಜನೆಯ ಬಗ್ಗೆ ಇನ್ನಿತರೆ ವಿಷಯಗಳ ಬಗ್ಗೆ ತೀರ್ಮಾನ ಕೈಗೊಳ್ಳುವುದು.
4. ಪ್ರತಿ ತಿಂಗಳಿಗೊಮ್ಮೆ ಅಥವಾ ಸಂದರ್ಭಾನುಸಾರ ಸಭೆ ನಡೆಸಿ ಪರಿಶೀಲಿಸುವುದು.

**2. ಜಿಲ್ಲಾ ಮಟ್ಟದ ಯೋಜನೆ ಮೇಲ್ವಿಚಾರಣೆ ಅನುಷ್ಠಾನ ಸಮಿತಿ:**

| | | |
|---|---|---|
| 1 | ಜಿಲ್ಲಾ ಉಪ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ | ಅಧ್ಯಕ್ಷರು |
| 2 | ನಿರ್ದೇಶಕರು, ಜಿಲ್ಲಾ ಸಹಕಾರ ಹಾಲು ಒಕ್ಕೂಟ | ಸದಸ್ಯ ಕಾರ್ಯದರ್ಶಿ |
| 3 | ಜಿಲ್ಲಾ ಉಪನಿಬಂಧಕರು, ಸಹಕಾರ ಇಲಾಖೆ | ಸದಸ್ಯರು |
| 4 | ಉಪನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 5 | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ | ಸದಸ್ಯರು |

**ಸಮಿತಿ ಕರ್ತವ್ಯಗಳು:**

1. ಜಿಲ್ಲೆಯಲ್ಲಿ ಯೋಜನಾ ಪ್ರಗತಿ ಪರಿಶೀಲನೆ ಮಾಡುವುದು.
2. ಲೆಕ್ಕಪತ್ರಗಳ ಬಗ್ಗೆ ತಪಾಸಣೆ ಮತ್ತು ಪರಿಶೀಲನೆ ಮಾಡುವುದು ಹಾಗೂ ವರದಿಗಳನ್ನು ರಾಜ್ಯ ಮಟ್ಟದ ಸಮಿತಿ/ ಸಂಬಂಧಿಸಿದ ಇಲಾಖೆಗಳಿಗೆ ಸಲ್ಲಿಸುವುದು.

3. ಯೋಜನೆಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ದೂರು/ಕುಂದುಕೊರತೆಗಳನ್ನು ಆಲಿಸುವುದು ಮತ್ತು ಪರಿಹಾರ ನೀಡುವುದು.
4. ಯೋಜನೆಯ ಬಗ್ಗೆ ಯಾವುದೇ ಲೋಪದೋಷಗಳು ಕಂಡುಬಂದಲ್ಲಿ ಆಯುಕ್ತರು, ಪಶುಸಂಗೋಪನಾ ಇಲಾಖೆರವರಿಗೆ ವರದಿ ಒಪ್ಪಿಸುವುದು ಹಾಗೂ ಸರ್ಕಾರದ ಸೂಚನೆಗಳನ್ನು ತಾಲ್ಲುಕುಮಟ್ಟದ ಸಮಿತಿಗೆ ಹಾಗೆ ಹಾಲು ಉತ್ಪಾದಕರ ಸಹಕಾರ ಸಂಘಗಳಿಗೆ ಆಗಿಂದಾಗ್ಗೆ ತಿಳಿಸುವುದು.
5. ಸಮಿತಿಯು ತಿಂಗಳಿಗೊಮ್ಮೆ ಅಥವಾ ಸಂದರ್ಭಾನುಸಾರ ಸಭೆ ಸೇರುವುದು.

**3. ತಾಲ್ಲೂಕು ಮಟ್ಟದ ಯೋಜನೆ ಮೇಲ್ವಿಚಾರಣೆ ಅನುಷ್ಠಾನ ಸಮಿತಿ:**

| | | |
|---|---|---|
| 1 | ಸಹಾಯಕ ನಿರ್ದೇಶಕರು, ಪಶು ಆಸ್ಪತ್ರೆ, ತಾಲ್ಲೂಕು ಕೇಂದ್ರ | ತಂಡದ ಮುಖ್ಯಸ್ಥರು |
| 2 | ಉಪ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸಹಕಾರ ಹಾಲು ಒಕ್ಕೂಟ ಅಥವಾ ಅವರ ಪ್ರತಿನಿಧಿಗಳು | ತಂಡದ ಸಂಚಾಲಕರು |
| 3 | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ | ಸದಸ್ಯರು |
| 4 | ಸಹಾಯಕ ನಿಬಂಧಕರು (ಸಹಕಾರ ಸಂಘಗಳು) ಅಥವಾ ಅವರ ಪ್ರತಿನಿಧಿ | ಸದಸ್ಯರು |
| 5 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ | ಸದಸ್ಯರು |

**ಸಮಿತಿ ಕರ್ತವ್ಯಗಳು:**

1. ಹಾಲಿನ ಪ್ರೋತ್ಸಾಹ ಧನ ಕ್ಲೈಂ ಲೆಕ್ಕಪತ್ರಗಳನ್ನು ನಿಯತಕಾಲಿಕ ತಪಾಸಣೆ.
2. ಪ್ರೋತ್ಸಾಹ ಧನ ನೀಡಿಕೆ ಸಂಬಂಧಿಸಿದಂತೆ ಸೂಚಿಸಲಾಗಿರುವ ಕಡತಗಳ ರಿಜಿಸ್ಟರ್‌ಗಳ ಮತ್ತು ಇನ್ನಿತರೆ ದಾಖಲಾತಿಗಳ ನಿಯತಕಾಲಿಕ ತಪಾಸಣೆ ಮಾಡುವುದು ಹಾಗೂ ಜಿಲ್ಲಾ ಸಮಿತಿಗೆ ಮತ್ತು ಜಿಲ್ಲಾ ಉಪ ನಿರ್ದೇಶಕರು, ಪಶುಪಾಲನಾ ಇಲಾಖೆಗೆ ವರದಿ ಒಪ್ಪಿಸುವುದು.
3. ಪ್ರಗತಿ ಪರಿಶೀಲನೆ ಹಾಗೂ ಫಲಾನುಭವಿ ಪಟ್ಟಿ ಪರಿಶೀಲಿಸುವುದು.
4. ಫಲಾನುಭವಿಗಳಿಗೆ ನೀಡಲಾಗುವ ಹಣ ಪಾವತಿ ಬಗ್ಗೆ ಪರಿಶೀಲಿಸುವುದು.
5. ಯೋಜನೆಯ ಅನುಷ್ಠಾನದಲ್ಲಿ ಯಾವುದೇ ವ್ಯತ್ಯಾಸಗಳು ಅಥವಾ ಲೋಪದೋಷಗಳು ಕಂಡುಬಂದಲ್ಲಿ ಜಿಲ್ಲಾ ಸಮಿತಿ/ಸಂಬಂಧಿಸಿದ ಮೇಲಾಧಿಕಾರಿಗಳಿಗೆ ವರದಿ ಮಾಡುವುದು.
6. ರಾಜ್ಯ ಪರಿಶೀಲನಾ ಸಮಿತಿ/ಜಿಲ್ಲಾ ಪರಿಶೀಲನಾ ಸಮಿತಿ/ ಸರ್ಕಾರ/ ಕಾಲಕಾಲಕ್ಕೆ ನೀಡುವ ಆದೇಶ/ ಸೂಚನೆ ತೀರ್ಮಾನಗಳನ್ನು ಅನುಷ್ಠಾನಗೊಳಿಸಲು ಕ್ರಮ ವಹಿಸುವುದು.

**4. ಲೆಕ್ಕ ರಿಜಿಸ್ಟರ್ ನಿರ್ವಹಣೆ ವಿಧಾನಗಳು:**

ಪ್ರತಿ ಹಾಲು ಉತ್ಪಾದಕರ ಸಹಕಾರ ಸಂಘ ಪ್ರತ್ಯೇಕವಾಗಿ ಕೆಳಕಂಡ ವಿಷಯಗಳನ್ನೊಳಗೊಂಡಂತೆ ರಿಜಿಸ್ಟರ್‌ನ್ನು ನಿರ್ವಹಿಸುವುದು.

1. ಸಹಕಾರ ಸಂಘಕ್ಕೆ ಹಾಲು ಹಾಕುವ ಫಲಾನುಭವಿಗಳ ಪಟ್ಟಿಯನ್ನು ವರ್ಗವಾರು ಅಂದರೆ ಸಣ್ಣ/ ಅತಿಸಣ್ಣ ರೈತರು/ ಕೃಷಿ ಕಾರ್ಮಿಕರು/ ಪರಿಶಿಷ್ಟ ಜಾತಿ/ ಪಂಗಡದವರು/ ಮಹಿಳೆಯರು/ ಇತರರು.
2. ಫಲಾನುಭವಿಗಳು ಒಟ್ಟು ಹಾಲು ಹಾಕಿದ ದಿನಗಳು/ ಹಾಲಿನ ಪ್ರಮಾಣ.
3. ಪ್ರತಿ ಸಂಘ ಸಂಗ್ರಹಿಸಿದ ಹಾಲಿನ ಪ್ರಮಾಣ.
4. ಪ್ರತ್ಯೇಕವಾದ ಪ್ರೋತ್ಸಾಹ ಧನ ಬಟವಾಡೆ ರಿಜಿಸ್ಟರ್ (acquittance Register).
5. ಹಾಲು ಉತ್ಪಾದಕರ ಸಹಕಾರ ಸಂಘದ ಕಾರ್ಯದರ್ಶಿಗಳು ನಿರ್ದಿಷ್ಟ ಪಡಿಸಿದ ಸಮಯದೊಳಗೆ ಫಲಾನುಭವಿಗಳಿಗೆ ಸಾಧ್ಯವಾದಷ್ಟು ಮಟ್ಟಿಗೆ ಬ್ಯಾಂಕ್ ಖಾತೆ ಮೂಲಕ ಪ್ರೋತ್ಸಾಹ ಧನವನ್ನು ನೀಡುವುದನ್ನು ಖಾತರಿ ಪಡಿಸಬೇಕಾಗುವುದು.
6. ಯಾವುದೇ ಸಂಘಗಳು ಪ್ರೋತ್ಸಾಹ ಧನ ದುರುಪಯೋಗ ಮಾಡಿದಲ್ಲಿ ಅಂತಹ ಸಂಘಗಳನ್ನು ಸಿಆರ್‌ಪಿಸಿ ಕಾಯ್ದೆ/ಕಾಲಕಾಲಕ್ಕೆ ಜಾರಿಯಾಗುವ ಕಾನೂನು ಮತ್ತು ಕಾಯ್ದೆಗೆ ಅನುಗುಣವಾಗಿ ಶಿಕ್ಷೆಗೆ ಗುರಿಪಡಿಸಲಾಗುವುದು.
7. ಪ್ರತಿ ತಿಂಗಳ 5ನೇ ತಾರೀಖಿನಂದು ಹಿಂದಿನ ತಿಂಗಳಿಗೆ ಸಂಬಂಧಿಸಿದ ಪ್ರೋತ್ಸಾಹ ಧನದ ಮೊತ್ತವನ್ನು ಫಲಾನುಭವಿಗಳಿಗೆ ಪಾವತಿಸಲು ಹಾಲು ಉತ್ಪಾದಕರ ಸಹಕಾರ ಸಂಘದ ಕಾರ್ಯದರ್ಶಿಗಳು ಕ್ರಮವಹಿಸತಕ್ಕದ್ದು.

ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಯೋಜನೆಯನ್ನು ತ್ವರಿತವಾಗಿ ಹಾಗೂ ಸಮರ್ಪಕವಾಗಿ ಅನುಷ್ಠಾಗೊಳಿಸಲು ಅವಶ್ಯವಿರುವ ಅಂಶಗಳ ಬಗ್ಗೆ ಸುತ್ತೋಲೆಯನ್ನು ಎಲ್ಲಾ ಅನುಷ್ಠಾನಾಧಿಕಾರಿಗಳಿಗೆ ಹೊರಡಿಸತಕ್ಕದ್ದು.

**ಬಿ.ಕೆ. ಶ್ರೀನಿವಾಸಮೂರ್ತಿ**

ಪಿ.ಆರ್. 1488

ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಸಂಖ್ಯೆ: ಸಿಆಸುಇ 045 ಕೆಇವಿ 08, ದಿನಾಂಕ: 13ನೇ ಅಕ್ಟೋಬರ್ 2008.**

**ತಿದ್ದುಪಡಿ**

ದಿನಾಂಕ 23–2–08ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 070 ಕೆಇವಿ 07ರ ಆದೇಶ ಭಾಗದ ಎರಡನೇ ಕಂಡಿಕೆಯ ಮೊದಲನೇ ಸಾಲಿನಲ್ಲಿ ಇರುವ "ದಿನಾಂಕ 20–6–06 ರಿಂದ 15–12–06 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 1958ರ ನಿಯಮ 106–A ರ ಪ್ರಕಾರ dies-non ಅವಧಿಯೆಂದು" ಎಂಬ ವಾಕ್ಯವನ್ನು "ದಿನಾಂಕ 22–6–06 ರಿಂದ 15–12–06 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 1958ರ ಪ್ರಕಾರ ಕರ್ತವ್ಯ ರಹಿತ (dies-non) ಅವಧಿಯೆಂದು" ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1463

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–2)

## RURAL DEVELOPMENT AND PANCHAYAT RAJ SECRETARIAT

**No. RDP 16 NRE 2007, Bangalore, Dated 8th July 2008**

**CORRIGENDUM**

**Sub :** Implementation of National Rural Employment Guarantee Scheme in all the district of the state – creation of new Directorat of NREGA and the posts there for etc orders – regarding.

**Read :** 1. G.O. No. RDP-104 Ukhayo 2007, Bangalore, Dated 2-4-2008.
2. GOK No. RDP/42/NRE 2006, Bangalore, Dated 10th August 2006.

1. The pay scale of Rs. 10800-20025 in respect of the post of Assistant Statistical officer as indicated at annexure-I of teh G.O. cited at (1) above may please be read as "Rs. 10000-18500".

2. In view of the creation of 176 posts of the Additional Programme Officers for all the Taluks of the 29 districts in the state vide G.O. cited at (1) above, the orders issued for the creation of 32 posts of Additional Programme Officers in respect of the 32 taluks of the five districts viz., Bidar, Gulbarga, Raichur, Davanagere and Chitradurga of the phase-I vide GO cited at (2) above stands cancelled.

By order in the name of the Governor of Karnataka

PR. 1092

**A.S. SRIKANTH**

Secretary to Government (PR),
Rural Development & Pan. Raj Department.

## EDUCATION SECRETARIAT

**No. ED 110 URC 2008, Bangalore, Dated 17th September 2008**

**CORRIGENDUM**

In the order portion of Government Order No. ED 110 URC 2008, dated 5-9-2008, the names and address vide Sl.No. 3, 4, 5, 6, 13 and 16 the following to be inserted.

3) Dr. V.B. Kutinho,
Former Vice-Chancellor (Gulbarga University),
No. 97, 6th H Cross, Ramaiah Layout, Bangalore-84.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 91 ಪೊಸಇ 2008 ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಹಿನ್ನಲೆಯಲ್ಲಿ ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ದಿನಾಂಕ 20–03–2008ರ ಅಧಿಸೂಚನೆಯಲ್ಲಿನ ಈ ಕೆಳಕಂಡ ವರ್ಗಾವಣೆಗಳನ್ನು ಸ್ಥಿರೀಕರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ: | ವರ್ಗಾವಣೆಯ ನಂತರ ಸ್ಥಳನಿಯುಕ್ತಿಗೊಳಿಸಿದ ಹುದ್ದೆ |
|---|---|---|
| 1. | ಶ್ರೀ ಪಿ.ಎಸ್. ಗಚ್ಚಿನಕಟ್ಟಿ, ಡಿವೈ.ಎಸ್.ಪಿ, ಸಿ.ಓ.ಡಿ, ಬೆಂಗಳೂರು ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವವರು | ಎ.ಸಿ.ಪಿ, ಅಲಸೂರುಗೇಟ್ ಸಬ್ ಡಿವಿಷನ್, ಬೆಂಗಳೂರು ನಗರ – ಶ್ರೀ ಎಸ್.ಆರ್.ವಿಜಯಕುಮಾರ್ ರವರ ವರ್ಗಾವಣೆಯಿಂದ ತೆರವಾದ ಹುದ್ದೆ |
| 2. | ಶ್ರೀ ಎಸ್.ಆರ್. ವಿಜಯಕುಮಾರ್, ಎ.ಸಿ.ಪಿ, ಅಲಸೂರುಗೇಟ್ ಸಬ್ ಡಿವಿಷನ್, ಬೆಂಗಳೂರು ನಗರ | ಎಸಿಪಿ, ಸಿ.ಸಿ.ಆರ್‌ಬಿ, ಬೆಂಗಳೂರು ನಗರ ಶ್ರೀ ಡಿ. ವೆಂಕಟೇಶ್ ರವರ ವರ್ಗಾವಣೆಯಿಂದ ತೆರವಾದ ಹುದ್ದೆ |
| 3 | ಶ್ರೀ ಡಿ. ವೆಂಕಟೇಶ್, ಎಸಿಪಿ, ಸಿ.ಸಿ.ಆರ್.ಬಿ, ಬೆಂಗಳೂರು ನಗರ | ಎಸಿಪಿ ವಿಧಾನ ಸೌಧ ಭದ್ರತೆ ಖಾಲಿ ಹುದ್ದೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1213

ಟಿ.ಎನ್. ರವಿಪ್ರಕಾಶ್
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಕಂದಾಯ ಸಚಿವಾಲಯ**

**ಸುತ್ತೋಲೆ**

**ಸಂ: ಕಂಇ 445 ಎಎಸ್‌ಡಿ 2008, ಬೆಂಗಳೂರು, ದಿನಾಂಕ 14ನೇ ನವೆಂಬರ್ 2008.**

**ವಿಷಯ :** ಸುಳ್ಳು/ಖೊಟ್ಟ ಪರಿಶಿಷ್ಟ ಪಂಗಡದ ಜಾತಿ ಪ್ರಮಾಣ ಪತ್ರಗಳನ್ನು ರದ್ದುಪಡಿಸುವ ಬಗ್ಗೆ.

ಸರ್ಕಾರಿ ಆದೇಶ ಸಂ: ಎಸ್‌ಡಬ್ಲ್ಯೂಡಿ 713 ಎಸ್‌ಎಡಿ 2005, ದಿನಾಂಕ 30–6–2007ರನ್ವಯ ತಾಲ್ಲೂಕು ದಂಡನಾಧಿಕಾರಿಗಳು 2002ಕ್ಕಿಂತ ಮುಂಚೆ ತಪ್ಪು ದಾಖಲೆಗಳ ಆಧಾರದ ಮೇಲೆ ಯಾವುದೇ ಜಾತಿ ಪ್ರಮಾಣ ಪತ್ರ ಹೊರಡಿಸಿರುವುದು ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಅಧಿಕಾರಿಗಳ–ಇತರೆ ಯಾವುದೇ ಅಧಿಕೃತ ವಿಚಾರಣಾಧಿಕಾರಿಗಳು ಪತ್ತೆ ಮಾಡಿ ತಿಳಿಸಿದಲ್ಲಿ ಅಥವಾ ಸ್ವಯಂ ಪ್ರತ್ಯೇಕವಾಗಿ ಅಂತಹ ಸುಳ್ಳು ಜಾತಿ ಪ್ರಮಾಣ ಪತ್ರದ ಬಗ್ಗೆ ಪರಿಶೀಲಿಸಿ ಕೂಡಲೇ ರದ್ದುಗೊಳಿಸಬೇಕಾಗಿರುವುದನ್ನು ಸರ್ಕಾರಿ ಆದೇಶ ಸಂ: ಎಸ್‌ಡಬ್ಲ್ಯೂಡಿ 713/ಎಸ್‌ಎಡಿ/93, ದಿನಾಂಕ 11–3–2002ರಲ್ಲಿ ದೃಢಪಡಿಸಲಾಗಿದೆ. ಅದರಂತೆ ಸುಳ್ಳು ಜಾತಿ ಪ್ರಮಾಣ ಪತ್ರಗಳನ್ನು ಪಡೆದ ಫಲಾನುಭವಿಗಳು ಕೂಡ ತಕ್ಷಣವೇ ಅವುಗಳನ್ನು ಸಂಬಂಧಿಸಿದ ತಾಲ್ಲೂಕು ದಂಡಾಧಿಕಾರಿಗಳಿಗೆ ವಾಪಸ್ಸ್ (Surrender) ಮಾಡಬೇಕೆಂದು ನಿರ್ದೇಶಿಸಲಾಗಿದೆ.

ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದಲ್ಲಿರುವ ಸುಮಾರು 1500 ಪ್ರಕರಣಗಳನ್ನು ಪರಿಶೀಲಿಸಿದಾಗ ಸಂಬಂಧಿಸಿದ ತಾಲ್ಲೂಕು ದಂಡನಾಧಿಕಾರಿಗಳಿಗೆ ಈ ಬಗ್ಗೆ ತನಿಖಾಧಿಕಾರಿಗಳಿಂದ ತಿಳಿಸಿದ್ದರೂ ಅಥವಾ ಅವರ ಗಮನಕ್ಕೂ ಬಂದರೂ ರದ್ದುಪಡಿಸದಿರುವ ಹೆಚ್ಚಿನ ಪ್ರಕರಣಗಳು ಬಾಕಿ ಇರುವುದೆಂದು ತಿಳಿದುಬಂದಿರುತ್ತದೆ. ಆದ್ದರಿಂದ, ಈ ಬಗ್ಗೆ ನಿಗಧಿತ ಅವಧಿಯಲ್ಲಿ ಕ್ರಮಕೈಗೊಳ್ಳದಿದ್ದಲ್ಲಿ ಉದ್ದೇಶ ಪೂರ್ವಕವಾಗಿ ವಿಳಂಬ ಮಾಡುವ ಅಧಿಕಾರಿಗಳ ಮೇಲೆ ಎಸ್‌ಸಿ/ಎಸ್‌ಟಿ ಕಾಯ್ದೆ 1989ರ ಕಲಂ 4ರ ಪ್ರಕಾರ ಕ್ರಮ ಕೈಗೊಳ್ಳಲೇ ಬೇಕಾಗಿರುವುದು. ಆದುದರಿಂದ, ತಮ್ಮ ಅಧೀನದಲ್ಲಿ ಬರುವ ಎಲ್ಲಾ ತಾಲ್ಲೂಕು ದಂಡನಾಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಿದಲ್ಲಿ, ಈ ರೀತಿ ದುರುಪಯೋಗವನ್ನು ಯಶಸ್ವಿಯಾಗಿ ತಡೆಯಲು ಸಹಾಯವಾಗುತ್ತದೆ. ನಿಗದಿತ ಅವಧಿಯಲ್ಲಿ ಕ್ರಮ ಕೈಗೊಳ್ಳದಿದ್ದರೆ ತಾಲ್ಲೂಕು ದಂಡಾಧಿಕಾರಿಗಳು ನೇರವಾಗಿ ಹೊಣೆಯಾಗುತ್ತಾರೆ. ಆದ್ದರಿಂದ ಈ ಬಗ್ಗೆ ತಕ್ಷಣವೇ ಕ್ರಮಕೈಗೊಂಡು ಸಂದರ್ಭಾನುಸಾರ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸತಕ್ಕದ್ದು ಎಂದು ಈ ಮೂಲಕ ತಿಳಿಸಲಾಗಿದೆ.

**ಡಿ. ತಂಗರಾಜ್**

ಪಿ.ಆರ್. 1599

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ